

'ಮಾಯಾಮಂದಿರ' ದಿಂದ ಮೊದಲಾಗಿ
'ಶಾಂತಿ' ಯಲ್ಲಿ ಕೊನೆಗೊಳ್ಳುವ ಈ
ಸಂಗ್ರಹವು ಭುಜೇಂದ್ರರ ತಾತ್ವಿಕ
ದೃಷ್ಟಿಗೆ ಸಾಕ್ಷಿಯಾಗಿದೆ.
ಭುಜೇಂದ್ರರ ಕವಿತಾಶಕ್ತಿ ಸಹಜವಾದುದು,
ಅಜೇಯವಾದುದು. ಬಾಳಿನ ಬಂಜರು ನೆಲ-
ದಲ್ಲಿ ಗಡಿನಾಡಿನ ಕನ್ನಡ ಸೀಮೆಯಲ್ಲಿ ಅದು
ಅಳುಕದೆ ಆಳವಾಗಿ ಬೇರೂರಿ ನಿಂತ ಹಸುರು
ಮರವಾಗಿದೆ. ಅದು ಬೆಳೆಯುವದು ಖಂಡಿತ,
ಬೆಳೆದಂತೆ ತನ್ನ ಹೂ ಹಣ್ಣುಗಳನ್ನು ಇನ್ನೂ
ಸವಿಯಾಗಿ ನೀಡುವದು ಖಂಡಿತ.

—ಶಂ. ಶ್ರೀ. ಮುಗಳಿ.

ಹೊಸಗನ್ನಡ ಕಾವ್ಯಮಾಲಾ : ೫

# ಮಾಯಾಮಂದಿರ

( ಕವನ ಸಂಗ್ರಹ )



ಭುಜೇಂದ್ರ ಮಹಿಷವಾಡಿ

೧೯೫೦

ಶಾಂತಿಸೇವಾ ಸದನ, ಸೇಡಬಾಳ

# ಮುನ್ನುಡಿ

'ಭೂಮಿಯ ಕಾವ್ಯಕ್ಕೆ ಸಾವಿಲ್ಲ' ಎಂದು ಆಂಗ್ಲ ಕವಿಯೊಬ್ಬ ಹೇಳಿಹೋದನು ಅವನು ಹೋದಮೇಲೂ ಅವನು ಹೇಳಿದ ಮಾತು ದಿಟವಾಗಿ ನಿಂತಿದೆ. ಭೂಮಿಯ ರೂಪದಲ್ಲಿದ್ದ ಕಾವ್ಯ, ಭೂಮಿಯ ಮೇಲಿನ ಕಾವ್ಯ ಇವು ಒಂದಕ್ಕೊಂದು ಮರುನುಡಿಯುತ್ತ ಅಮರವಾಗಿವೆ. ವಿಜ್ಞಾನದಿಂದ ಕಾವ್ಯಕ್ಕೆ ಕೇಡುಗಾಲ ಬಂದಿತು ಎಂಬ ಮಾತು ಕಾವ್ಯದ ಬಗ್ಗೆ ಅಜ್ಞಾನದಿಂದ ಆಡಿದ್ದೇ ಸರಿ. ದುಃಖದ ಬೇಗೆಯಿಂದ ಕಾವ್ಯ ಕಮರಿತು ಎಂಬ ಮಾತೂ ಕಾವ್ಯದ ವಿಷಯವಾಗಿ ಅರಿತಿಳಿವಿನಿಂದ ಇಲ್ಲವೆ ಅತಿಮರುಕದಿಂದ ಆಡಿದುದು. 'ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್' ಎಂದು ಸಾವಿರ ವರ್ಷದ ಹಿಂದೆ 'ಕವಿರಾಜಮಾರ್ಗ' ಕಾರನು ಕನ್ನಡನಾಡವರ ಕವಿತಾ ಶಕ್ತಿಯನ್ನು ಕುರಿತು ಹೇಳಿದ ಹೆಮ್ಮೆಮಾತು ತೀರನಿಜವೆಂಬುದು ಇಂದಿಗೂ ತೋರಿದೆ. ಹೊಸಕನ್ನಡ ಕಾವ್ಯವು ಎಷ್ಟು ವಿವಿಧವಾಗಿದೆ, ಸತ್ವಯುತವಾಗಿದೆ ಎಂಬುದನ್ನು ಬಲ್ಲ ರಸಿಕರು ಕಂಡಿದ್ದಾರೆ. ಒಂದರ ಮೇಲೊಂದು ಕವಿಗಳ ಪೀಳಿಗೆ ಕನ್ನಡದ ನೆಲದಲ್ಲಿ ಸಾಜವಾದ ಹೂವಾಗಿ ಹಣ್ಣಾಗಿ ತಲೆದೋರುತ್ತಿದೆ. ಒಂದೊಂದರ ಚೆಲುವಿಗೆ ಒಂದು ನಿಲುವಿದೆ, ನೋಟವಿದೆ, ರುಚಿಯಿದೆ. ಹಿಂದಿನ ಸವಿಯನ್ನೆತ್ತಿಕೊಂಡು ತಾನು ಪಡೆದ ತನ್ನ ಸವಿಯನ್ನು ತುಂಬಿಕೊಂಡು ಅದು ಬಾಳುತ್ತಲಿದೆ. ರಸದೊಡನೆ ಕಸವಿದೆ, ಪಾಡಿನೊಡನೆ ಕಸುಕಿದೆ ಎಂಬುದು ರಸವನ್ನು ಪಾಡನ್ನು ಕಣ್ಮರೆಮಾಡಬೇಕೆ?

ನನ್ನ ತರುಣ ಮಿತ್ರರಾದ ಶ್ರೀ. ಭುಜೇಂದ್ರ ಮಹಿಷವಾಡಿ ಇವರು ಉದಯವಾಗುತ್ತಿರುವ ಹೊಸಪೀಳಿಗೆಯ ಕವಿಗಳಲ್ಲಿ ಒಬ್ಬರು. ಅವರು ಹಲವು ವರ್ಷಗಳಿಂದ ಬರೆಯುತ್ತಿದ್ದ ಕವಿತೆಗಳ ಮೊದಲನೆಯ ಕಟ್ಟು ಇಲ್ಲಿ ಹೊರಬೀಳುತ್ತಿದೆ. ಈ ಕಾಲೇಜಿಗೆ ವಿದ್ಯಾರ್ಥಿಯಾಗಿ ಬಂದು ಒಮ್ಮೆ ತಾವು ಬರೆದ ಕವನಗಳ ಒಂದು ವಹಿಯನ್ನು ಹೆದ-ಹೆದರುತ್ತ ಅವರು ನನ್ನ ಕೈಯಲ್ಲಿ ಕೊಟ್ಟರು. ಮೊದಲು ಅಲಕ್ಷ್ಯದಿಂದ ನಾನು ಪುಟಗಳನ್ನು ತಿರುವಿಹಾಕಿರಬೇಕು. ಮುಂದೆ ಓದುತ್ತ

ಹೋದಂತೆ ನನ್ನ ಕುತೂಹಲ ಕೆರಳಿತು, ರಸಿಕತೆ ಜಾಗೃತವಾಯಿತು. ಅವರ ಬರವಣಿಗೆಯಲ್ಲಿ ಕವಿತ್ವದ ಕಿಡಿಯನ್ನು ಕಂಡು ನಾನು ಮೆಚ್ಚಿದೆ, ಎಷ್ಟೋ ಉತ್ತೇಜನದ ನುಡಿಗಳನ್ನು ಹೇಳಿದೆ. 'ವರುಣ-ಕುಂಜ'ಕ್ಕೂ ಬರಹೇಳಿರಬೇಕು. ನನ್ನ ಸಲಿಗೆ ಅವರ ಸಂಕೋಚ-ವನ್ನು ಸಡಿಲಿಸಲಿಲ್ಲ. ದೂರದಲ್ಲಿದ್ದು ನಗೆಬೀರುತ್ತ ಅದರಿಂದಲೇ ತಮ್ಮ ಮನೋಗತವನ್ನು ತಿಳಿಸುವ ರೀತಿ ಅವರದು. ಕಾಲೇಜ ಪತ್ರಿಕೆಯಲ್ಲಿ ಅವರ ಒಂದೆರಡು ಕವಿತೆಗಳು ಪ್ರಕಟವಾದವು, ವಿದ್ಯಾರ್ಥಿವರ್ಗಕ್ಕೆ ಅವರು ಪರಿಚಿತರಾದರು. ಆದರೆ ಪರೀಕ್ಷೆಯಲ್ಲಿಯ ಸೋಲು ಅವರನ್ನು ತಟ್ಟನೆ ನನ್ನಿಂದ ದೂರ ಒಯ್ದಿತು. ಬಹುಕಾಲ ಅವರ ಸಮಾಚಾರವೇ ಇರಲಿಲ್ಲ. ಸಣ್ಣ ವಯಸ್ಸಿನಲ್ಲಿ ದುಃಖದ ಮೇಲೆ ದುಃಖ ಅವರಿಗೆ ಮುತ್ತಿಗೆಹಾಕಿತಂತೆ. ಸಾವುನೋವನ್ನು ಅವರು ಪ್ರತ್ಯಕ್ಷವಾಗಿ ಅನುಭವಿಸಿದರಂತೆ. ಹೀಗೆ ಬಾಳಕುಲಿಮೆಯಲ್ಲಿ ಅವರು ಬೆಂದರು, ಆದರೆ ಕರಗಲಿಲ್ಲ, ಕಾಸಿ ಬಡಿದ ಉಕ್ಕಿನಂತಾ-ದರು. ಅವರಲ್ಲಿ ಬಾಳನ್ನು ಇದುರಿಸುವ ಧೈರ್ಯ ಬಂದಿತು, ತತ್ವವನ್ನು ವಿವೇಕದ ಕಣ್ಣಿನಿಂದ ನೋಡುವ ಶಕ್ತಿ ಮೊಳೆಯಿತು. ದುಃಖದ ಬಸಿರಲ್ಲಿ ಹುಟ್ಟಿಬಂದ ತಿಳಿವು ನಲಿವುಗಳು ಅವರ ಕಾವ್ಯಗೀತೆಗೆ ಕಳೆಕಟ್ಟಿಸುವ ಶ್ರುತಿಗಳಂತಾದವು.

ಇಲ್ಲಿಯ ಸಂಗ್ರಹದಲ್ಲಿ ಭುಜೇಂದ್ರರ ಬೆಳೆಯುತ್ತಿರುವ ವ್ಯಕ್ತಿತ್ವದ ಗುರುತುಗಳು ಮೂಡಿವೆ. 'ಮಾಯಾಮಂದಿರ'ದಿಂದ ಮೊದಲಾಗಿ 'ಶಾಂತಿ'ಯಲ್ಲಿ ಕೊನೆಗೊಳ್ಳುವ ಈ ಸಂಗ್ರಹವು ಅವರ ತಾತ್ವಿಕ ದೃಷ್ಟಿಗೆ ಸಾಕ್ಷಿಯಾಗಿದೆ. 'ಮಾಯಾಮಂದಿರ'ದಲ್ಲಿ ಅವರು ಮಾಯೆಯ ತತ್ವವನ್ನೂ 'ಶಾಂತಿ'ಯಲ್ಲಿ ಅದನ್ನು ಮೀರಿದ ಶಾಂತಿಯ ತತ್ವವನ್ನೂ ಕಂಡಿದ್ದಾರೆ. ಜೀವನದ ವಾಸ್ತವವೂ ಆದರ್ಶವೂ ಇಲ್ಲಿ ಮೊದಲುಕೊನೆಗಳಲ್ಲಿ ಬಂದು ಸಂಗ್ರಹವನ್ನು ಸಮಗ್ರಗೊಳಿಸಿರುತ್ತವೆ. 'ಮಾಯಾಮಂದಿರ'ದಲ್ಲಿ ಅವರ ಕಲ್ಪ-ನೆಯ ಕುಸುರಿದೆ, ಜೊತೆಗೆ ಅದರ ಹಸುಳೆತನವೂ ಇದೆ. ಬಾಳಿನ ತೊಟ್ಟಿಲ 'ಹಗಲಿರುಳಿನ ಮೇಲುರುಳುತ' ತೂಗುತಿದೆ ಎಂದು

ಮೊದಲ ಪದ್ಯದಲ್ಲಿ ಹೇಳಿ ಮುಂದಿನ ಪದ್ಯದಲ್ಲಿ 'ಹಗಲಿರುಳೆಂಬುವ ಕಾಲನ ಕೈಗಳು ತೊಟ್ಟಿಲ ತೂಗುವ ತೋಳುಗಳು' ಎಂದು ಕಲ್ಪನೆಯನ್ನು ಹೊರಳಿಸಲಾಗಿದೆ. ಎರಡನೆಯ ಕಲ್ಪನೆ ಹೆಚ್ಚು ರಮ್ಯವಾದುದು, ಅರ್ಥಪೂರ್ಣವಾದುದು. ಆದರೆ ಮೊದಲ ಚಿತ್ರದೊಡನೆ ಅದು ಮೇಳಗೊಳ್ಳುವುದಿಲ್ಲ. ಅದೇ 'ಶಾಂತಿ'ಯಲ್ಲಿ ಚಿತ್ರವೂ ಭಾವವೂ ಸರಿಬೆರೆತು ಮಾಗಿದೆ, ನುಡಿ ಹದಗೊಂಡಿದೆ. ಇಂಥ ಕವನಗಳಲ್ಲಿ ಬರಲಿರುವ ಸಿರಿವಂತಿಕೆಯ ಕಣ್ಸನ್ನೆಯನ್ನು ನಾನು ಅರಿತಿದ್ದೇನೆ. ಈ ಬಾಳು ಹಾಳೆಂದು, ಸುಖವೆಲ್ಲಿ, ಮಾಯೆಗೆ, ಇರು, ಜೀವಿಸಿ ಇರುವುದೆ ಜೀವನದರ್ಥವು ಈ ಮುಂತಾದ ಹಲವು ಕವನಗಳಲ್ಲಿ ಇವರ ತಾತ್ವಿಕತೆ ಸುಳಿಸುಳಿಯಾಗಿ ತಲೆಯೆತ್ತಿದೆ. ಅದರಲ್ಲಿ ನಿರಾಶೆ-ನಿರ್ವೇಗಗಳನ್ನು ಗೆದ್ದು ನಿಂತ ಗಟ್ಟಿತನವೂ ಬಾಳಿನಲ್ಲಿ ನಂಬಿಗೆಯೂ ವ್ಯಕ್ತವಾಗಿವೆ. ಅವುಗಳಲ್ಲಿದ್ದ ತತ್ವವಾಗಲಿ ಕಾವ್ಯಭಾವವಾಗಲಿ ಹೊಸದಲ್ಲ. ಆದರೆ ಕವಿಯ ಜೀವನದಲ್ಲಿ ಅವುಗಳ ಸಾಕ್ಷಾತ್ಕಾರ ಹೊಸದು. ಅಂತೇ ಅವುಗಳ ನೇರವಾದ ನಿರೂಪಣೆಯಲ್ಲಿ ಒಂದು ಆತ್ಮೀಯತೆಯ ಕಾವಿದೆ, ಮನಸ್ಸನ್ನೆಳೆಯುವ ಗುಣವಿದೆ.

ಇನ್ನೊಂದು ಬಗೆಯ ಕವನಗಳೆಂದರೆ ನಮ್ಮ ನಾಡಬಾಳಿಗೆ ಸಂಬಂಧಪಟ್ಟವು. ಅವುಗಳಲ್ಲಿ ರಾಷ್ಟ್ರೀಯ ವಿಷಯಗಳನ್ನು ಕುರಿತು ಮಾನವೀಯವಾದ ದೃಷ್ಟಿಯಿಂದ ಕವಿ ತನ್ನ ಹೃದ್ಗತವನ್ನು ತೋಡಿಕೊಂಡಿದ್ದಾನೆ. ಕೈಕೆಸರವಾಡಿ ಮೊಸರುಣ್ಣಲೇಳಿ, ಜ್ಯೋತಿ ನಂದಿ ಹೋಯಿತೆ, ಸಾಲದೇನೊಂದೆ ಮನುಜಜಾತಿ, ಅನ್ನದೇವರು, ಹಿಂದುಳಿದು ಹುರುಳಿಲ್ಲ ಈ ಮುಂತಾದ ಕವಿತೆಗಳು ಈ ಗುಂಪಿನಲ್ಲಿ ಬರುತ್ತವೆ. ಇವುಗಳಲ್ಲಿ ನಾಡಿನ ಸಮಸ್ಯೆಗಳ ಸರಿಯಾದ ಅರಿವು, ಅವನ್ನು ಬಿಡಿಸುವ ರೀತಿಯ ಬಗ್ಗೆ ತಿಳಿವಳಿಕೆ, ರಾಷ್ಟ್ರೀಯ ಭಾವನೆ ಇವನ್ನು ನುಡಿನುಡಿಯಲ್ಲಿ ಕಾಣಬಹುದು. ಇಂಥ ಬರೆವಣಿಗೆಯಲ್ಲಿ ಉಪದೇಶಕನ ಸರಣಿ ಇಲ್ಲವೆ ಭಾಷಣಕಾರನ ಆರ್ಭಟೆ ಆಗಾಗ ಹಣೆಯಿಕ್ಕಬಹುದು. ಆದರೆ ಒಟ್ಟಿನಲ್ಲಿ ಸದ್ಭಾವನೆ ಹಾಗೂ ಕಲ್ಪಕತೆ ಕೈಯಲ್ಲಿ ಕೈಹಾಕಿ ಸಾಗಿರುವುದೂ ಸಯವಾದ ಲಯಬದ್ಧವಾದ ಮಾತು ಅವಕ್ಕೆ ವಾಹಕವಾಗಿರುವುದೂ ಕಂಡು ಬಂದಿದೆ.

ಇನ್ನುಳಿದ ಕವನಗಳಲ್ಲಿ ಕೆಲವು ಶೃಂಗಾರಿಕವಾಗಿವೆ, ಬೇರೆ ಕೆಲವು ವೈಯಕ್ತಿಕವಾದ ನಿಸರ್ಗದ ಇಲ್ಲವೆ ಜೀವನದ ಅನುಭವವನ್ನು ಚಿತ್ರಿಸುತ್ತವೆ. ಶೃಂಗಾರಿಕವಾದವುಗಳಲ್ಲಿ ದಾಂಪತ್ಯ ಜೀವನದಲ್ಲಿ ಕವಿ ಅನುಭವಿಸಿದ ಶುಚಿಯಾದ ಚಿತ್ರಗಳಿವೆ, ನೈಜವಾದ ಭಾವನೆಯಿದೆ. ಹೊಸಕಾಲದ ಭಾವಗೀತೆಗಳಲ್ಲಿ ಇಂಥವಕ್ಕೆ ಸ್ಥಾನವಿದೆ ಎಂಬುದನ್ನು ಈಗ ಸಿದ್ಧಮಾಡುವ ಅಗತ್ಯವಿಲ್ಲ. ನಿಸರ್ಗಪರವಾದ ಕವನಗಳಲ್ಲಿ ಕೋಗಿಲೆಗೆ, ಬೆಳ್ಳಿ, ಇವು ಚೆನ್ನಾಗಿವೆ.

ಭುಜೇಂದ್ರರ ಕವಿತಾಶಕ್ತಿ ಸಹಜವಾದುದು, ಅಜೇಯವಾದುದು. ಬಾಳಿನ ಬಂಜರುನೆಲದಲ್ಲಿ ಗಡಿನಾಡಿನ ಕನ್ನಡ ಸೀಮೆಯಲ್ಲಿ ಅದು ಅಳುಕದೆ ಆಳವಾಗಿ ಬೇರೂರಿ ನಿಂತ ಹಸುರು ಮರವಾಗಿದೆ. ಅದು ಬೆಳೆಯುವುದು ಖಂಡಿತ, ಬೆಳೆದಂತೆ ತನ್ನ ಹೂ ಹಣ್ಣುಗಳನ್ನು ಇನ್ನೂ ಸವಿಯಾಗಿ ನೀಡುವುದು ಖಂಡಿತ. ಆದರೆ ಯಾವ ಕವಿಯೂ ಈ ಸಹಜವಾದ ಬೆಳವಣಿಗೆಯ ರೂಪಕವನ್ನು ಅತಿಯಾಗಿ ಎಳೆದು ಅದಕ್ಕೆ ಜೋತುಬೀಳಬಾರದು. ಕವಿಕೃತಿ ಸಹಜವೂ ನಿಜ, ಸಾಧನೆಯೆಂಬುದೂ ನಿಜ. ಇದನ್ನರಿತು ಭುಜೇಂದ್ರರು ಜೀವನದ ಹಾಗೂ ಕಾವ್ಯರಚನೆಯ ಸಾಧನೆಯಲ್ಲಿ ಮುಂದುವರಿಯಲಿ. ಈಗ ಕಂಡುಬಂದಿರುವ ಅರೆಕೊರೆಗಳನ್ನು ಕಳೆದುಕೊಂಡು ಕುಸುರು-ಕುಸುರಾಗಿ ಬೆಳೆಯಲಿ. ಈಗಿನ ಕಲ್ಪನೆಯಲ್ಲಿ ಒಣಚಮತ್ಕೃತಿ, ಭಾವನೆಯಲ್ಲಿ ಅತಿರೇಕ, ಅಭಿವ್ಯಕ್ತಿಯಲ್ಲಿ ಅಪೂರ್ಣತೆ, ಶೈಲಿಯಲ್ಲಿ ನೀರಸತೆ ಆಗಾಗ ತೋರಿರಬಹುದು. ಅವು ಈಗ ಸಹಜ ಎಂದರೆ ಯಾವಾಗಲೂ ಅಪರಿಹಾರ್ಯ ಎಂದಾಗಲಾರವು.

ಕನ್ನಡ ಕಾವ್ಯರಸಿಕರು ಭುಜೇಂದ್ರರ ಈ 'ಮಾಯಾಮಂದಿರ'ದಲ್ಲಿ ಹೊಕ್ಕು ಇವರ ಅಂದವನ್ನು ಮೆಚ್ಚಿ ಕೊಂಡಾಡಲಿ, ಇನ್ನೂ ಹಿರಿದಾದ ಕಾವ್ಯಮಂದಿರಗಳನ್ನು ಕಟ್ಟಲು ಅವರಿಗೆ ಸಹೃದಯ-ವಿಮರ್ಶೆಯಿಂದ ದಾರಿತೋರಲಿ.

೪-೪-೧೯೫೦
ವಿಶ್ರಾಮಬಾಗ

ರಂ. ಶ್ರೀ. ಮುಗಳಿ

# ನನ್ನ ನುಡಿ

ಈ ವಿಶ್ವಚಾಲಕನ ಅವ್ಯಕ್ತ ಸೆಳೆತಕ್ಕೂ, ಮಾಯೆಯು ಅದನ್ನು ಅವಿರಕ್ತವಾದ ಎಳೆತಕ್ಕೂ ಮತ್ತು ಹೃದಯದ ಒಳೆತಿಗೂ ಒಳಗಾಗಿ ನನ್ನ ದೃಷ್ಟಿಗೆ ತಿಳಿದಂತೆ ಹೊಳೆದಂತೆ ಈ ಕವನಗಳನ್ನು ಕಟ್ಟಿ ಹಾಡಿದ್ದೇನೆ. ಕನ್ನಡ ಪ್ರಪಂಚಕ್ಕೆ ನಾನು ನನ್ನ ಚೊಚ್ಚಲ ಕವನ ಸಂಗ್ರಹವನ್ನು ಇದೀಗ ನೀಡಿದ್ದೇನೆ. ಇದನ್ನು ಕನ್ನಡಿಗರು ಎತ್ತಿಕೊಂಡು ಮುದ್ದಾಡಿ ಹರಸಿದರೆ ಸಾಕು!

ಈಗ ಏಳೆಂಟು ವರುಷಗಳಿಂದ ನಾನು ಬರೆದ ಕವನಗಳಲ್ಲಿ ಕೆಲವನ್ನು ಈ ಸಂಗ್ರಹದಲ್ಲಿ ಹೆಣೆದಿದ್ದೇನೆ. ಇದರಲ್ಲಿಯ ಮುಕ್ಕಾಲು ಪಾಲು ಕವಿತೆಗಳು ಈ ಮೊದಲೆ ಹಲವಾರು ಕನ್ನಡ ಮಾಸಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಆಯಾ ಪತ್ರಿಕೆಗಳ ಸಂಪಾದಕರಿಗೆ ನಾನು ಋಣಿಯಾಗಿದ್ದೇನೆ.

ಪೂಜ್ಯ ಗುರುಗಳಾದ ಪ್ರೊ. ರಂ. ಶ್ರೀ. ಮುಗಳಿ ಎಂ.ಎ. ಬಿ.ಟಿ. ಅವರು ಮೊದಲಿನಿಂದಲೂ ನನ್ನ ಕಾವ್ಯಾಂಕುರಕ್ಕೆ ತಮ್ಮ ನಲ್ನೀರನೆರೆದು ಬೆಳೆಸುತ್ತಿದ್ದಾರೆ. ಅವರು ಈ ಕಾವ್ಯಶಿಶುವನ್ನು ತಾಯ ಕರುಳಿನಿಂದ ಎಣ್ಣೆ-ಬೆಣ್ಣೆ ಹಚ್ಚಿ ತಿದ್ದಿ ತೀಡಿ ಎರೆದು 'ಮಾಯಾ ಮಂದಿರ' ದ ತೊಟ್ಟಿಲಲ್ಲಿ ಹಾಕಿ ಮುನ್ನುಡಿಯ ಜೋಗುಳ ಹಾಡಿ ಹರಿಸಿದ್ದಾರೆ. ಅದಕ್ಕಾಗಿ ಅವರಿಗೆ ನಾನು ಚಿರಋಣಿ!

ನನ್ನ ಕವನಗಳಲ್ಲಿ ಹೆಚ್ಚು ಆಸ್ಥೆವಹಿಸಿ ಓದಿ, ಓದಿಸಿ ಕೇಳಿ, ಧೈರ್ಯಕೊಟ್ಟು ಕೈಹಿಡಿದು ಕರೆತಂದು ಸಾಹಿತ್ಯಕ್ಷೇತ್ರದಲ್ಲಿ ಸೇರಿಸಿದ ಶ್ರೀ. ಮಿರ್ಜಿ ಅಣ್ಣಾರಾಯರನ್ನು ಎಷ್ಟು ಸ್ಮರಿಸಿದರೂ ಕಡಿಮೆಯೆ!

ಪ್ರತಿನಿತ್ಯ ಸಾಹಿತ್ಯಗರಡಿಯಲ್ಲಿ ಸರಿಜೋಡಿಯಾಗಿ ನಿಂತು ಸಾಧನಮಾಡಿ ಶಕ್ತಿಯನ್ನು ಬೆಳಸಲು ಸಹಾಯಕರಾದ ಸನ್ಮಿತ್ರ ಶ್ರೀ. ಬ. ಗಿ. ಯಲ್ಲಟ್ಟಿ ಅವರಿಗೂ ಈ ಕೃತಿಯ ಯಶಾಪಯಶಗಳಲ್ಲಿ ಸರಿಪಾಲು ಸಲ್ಲಬೇಕು.

ನನ್ನ ಬಾಲ್ಯಮಿತ್ರರಾದ ಲಿಂಗಣ್ಣ, ಸಂಗಣ್ಣ, ಸತ್ಯಣ್ಣ ಅವರುಗಳ ತನುಮನಧನಗಳ ಸಹಾಯ ಸಲ್ಲದಿದ್ದರೆ, ಈ 'ಮಾಯಾಮಂದಿರ' ಕನಸಿನ ಮಂದಿರವಾಗಿ ನೆನಸಿನ ಲೋಕಕ್ಕೆ ಇಳಿಯದೆ

ಇರಬಹುದಾಗಿತ್ತೇನೊ! ಈ 'ಮಾಯಾಮಂದಿರವ' ವನ್ನು ಕಟ್ಟಿದ ಶಿಲ್ಪಿ ನಾನಾಗಿದ್ದರೂ ಕಟ್ಟಿಸಿದ ಶ್ರೇಯ ಅವರದೇ!

ತಮ್ಮ ಕಲೆಯ ಬೆಳಕಿನಲ್ಲಿ ಈ ಪುಸ್ತಕದ ಮುಖಚಿತ್ರವನ್ನು ಅಂದವಾಗಿ ಚಿತ್ರಿಸಿಕೊಟ್ಟ ಗೆ. ಪಾಟೀಲ ಅಜ್ಜಣ್ಣ ಹಾಗು ಹಸ್ತಪ್ರತಿಯನ್ನು ಸಿದ್ಧಗೊಳಿಸುವಲ್ಲಿ ಸಹಾಯಕರಾದ ನನ್ನ ಜೀವದ ಗೆಳೆಯ ನಾ. ಕೃ. ಅವರಿಗೂ ನಾನು ಉಪಕೃತನಾಗಿದ್ದೇನೆ.

ಈ ಪುಸ್ತಕವನ್ನು ಆದರದಿಂದ ಸ್ವೀಕರಿಸಿ ತಮ್ಮ ಪ್ರಕಟನಾಲಯದಿಂದ ಪ್ರಕಟಿಸಿ ಬೆಳಕಿಗೆ ತಂದ ಸೇಡಬಾಳದ 'ಶಾಂತಿಸೇವಾಸದನ' ದ ಸಂಪಾದಕರುಗಳಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಕೊನೆಯದಾಗಿ ಈ ಪುಸ್ತಕವನ್ನು ಅಂದವಾಗಿ ಅಚ್ಚು ಮಾಡಿ-ಕೊಟ್ಟ ಸಾಂಗಲಿಯ ಶ್ರೀ ಗಣಪತಿ ಸಂಸ್ಥಾನ ಪ್ರೆಸ್ಸಿನ ಮ್ಯಾನೇಜರ-ರಾದ ಶ್ರೀ. ಎಸ್. ಎನ್. ದೇಶಪಾಂಡೆ, ಎಮ್.ಎ., ಬಿ. ಎಸ್.ಸಿ. ಅವರಿಗೂ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಮಹಾವೀರ ಜಯಂತಿ<br>ಚೈತ್ರ ಶು. ತ್ರಯೋದಶಿ ಶಕೆ ೧೮೭೨<br>ತಾ. ೩೧-೩-೧೯೫೦

ತಮ್ಮವ<br>ಭುಜೇಂದ್ರ ಮಹಿಷವಾಡಿ



## ಪೂಜ್ಯ ಮಾತೋಶ್ರೀ ಅವರಿಗೆ—

ಯಾರು ಎನ್ನ ಭುವಿಗೆ ತಂದು
    ಬಾಳ ಬೆಳಕನಿತ್ತರೊ,
ಯಾರು ಎನ್ನ ಪ್ರೀತಿಗಾಗಿ
    ಪ್ರಾಣವನ್ನೆ ತೆತ್ತರೊ,
ಅವರ ಪಾದಕಮಲಗಳಲಿ
    ತೊದಲು ನುಡಿಯ ತರ್ಪಣ;
ಅವರ ನೆನಹಿಗಾಗಿ ಇದೋ–
    ಮೊದಲ ಕೃತಿಯು ಅರ್ಪಣ!



‘ ಬೇಡಿ ಪಡೆದು ದಿವ್ಯರಸನ ಚಾತಕಾ
ಮಾಡು ನಿನ್ನ ಜನ್ಮಜಾಲ ಸಾರ್ಥಕಾ
ಜಗದ ನೀರು ಹರಿದು ಬಂದು ಕರೆದರು
ಮುಗಿಲ ಹನಿಯು ದೊರೆವವರೆಗೆ ತಡೆದಿರು ’

—ರಸಿಕರಂಗ.

# ಪರಿವಿಡಿ

# ಮಾಯಾ ಮಂದಿರ

೧

ಈ ವಿಶ್ವದ ಮಾಯಾ ಮಂದಿರದೊಳು
ಬಾಳಿನ ತೊಟ್ಟಿಲ ತೂಗುತಿದೆ !
ಹುಟ್ಟಿನ ಸಾವಿನ ಮಧ್ಯಾಂತರದೊಳು
ಸಂತತನಿಂತಿದು ತೂಗುತಿದೆ !

ಹಗಲಿರುಳಿನಮೇಲುರುಳುತ ಹೊರಳುತ
ತೇಲುತ ತೇಲುತ ತೂಗುತಿದೆ !
ಹಿಂದಕೆ ಮುಂದಕೆ ಅಲೆದೊಲೆದಾಡುತ
ಕಾವರಿ ತೊಟ್ಟಿಲು ತೇಲುತಿದೆ !!

೨

ಚಿತ್ತ್ರರಗೊಂಡಿಹ ಚಿತ್ರದ ನೀಲಿಯ
ಮುಗಿಲದೆ ಮಾಳಿಗೆ ಈ ಮನೆಗೆ !
ವಿಶ್ವಟವರಿಗೂ ಹಬ್ಬಿದ ಭೂಮಿಯೆ
ತಾ ಪಡಸಾಲೆಯು ಈ ಮನೆಗೆ !

ನೀಲಮುಗಿಲನು ಜೋಡಿಸ ದಶದಿಕ್ಕುಗ-
ಳೀಮನೆ ಸುತ್ತಿದ ಗೋಡೆಗಳು !
ಹಗಲಿರುಳೆಂಬುವ ಕಾಲನ ಕೈಗಳು
ತೊಟ್ಟಿಲ ತೂಗುವ ತೋಳುಗಳು !!

೩

ತೊಟ್ಟಿಲ ಮೇಲ್ಗಡೆ ಕಟ್ಟಿದ ಮುತ್ತಿನ
ಚಟ್ಟದೊಳಿರುವವು ಚಿಕ್ಕೆಗಳು !
ಹೊಳೆಯುತಲಿರುವಾ 'ಬಿಲ್ವರ' ಹಂಡೆಗ-
ಳಾಗಿವೆ ಆ ರವಿಚಂದ್ರಗಳು !

ಮಗುವಿನ ಮನರಂಜನೆಗೋಸುಗವೇ
ಮಿನುಗುತಲಿರುವವು ನೋಡಲ್ಲಿ !
ಸುಂದರವಾಗಿದೆ ಮಾಯಾಮಂದಿರ
ಆ ರವಿ ಚಂದಿರ ಬೆಳಕಿನಲಿ !!

೮

ಗೊತ್ತಿದೆ ಏನ್ನೈ ಮಗುವಾರೆಂಬುದು
ಕೇಳ್ಳೈ ಆತ್ಮಾರಾಮನವ !
ಎಲ್ಲರ ಒಳಗಿನ ಒಳಗುರುವಾತನೆ
ನಿರ್ಮಲ ಆತ್ಮಾರಾಮನವ !

ಮಗುವಿನ ತಾಯ್ತಂದೆಗಳಾರೆಂದರೆ
ಮಾಯೆಯು ತಾಯಲ್ಲವೆ ಹೇಳು !
ಈ ಜಗದಾತ್ಮನೆ ತಂದೆಯು ಎಂದರೆ
ಹೌದೌದೆನ್ನುತ ನೀ ಕೇಳು !!

# " ಕೈಕೆಸರನಾಡಿ ಮೊಸರುಣ್ಣಲೇಳಿ! "

೧

ಪರರಾಜ್ಯ ಸಂದಾಯ್ತು
ಸ್ವಾತಂತ್ರ್ಯ ಬಂದಾಯ್ತು
ನಮಗೇನು ತಂದಾಯ್ತೊ ನಾವರಿಯೆವು.
ಕಣ್ಣೀರು ಇಂಗಿಲ್ಲ
ಹಸಿವೇನು ಹಿಂಗಿಲ್ಲ
ಮೊದಲೆಂತೊ ಈಗಂತೆ ನಾವಿರುವೆವು!

೨

ಹೊಸಜಾಲವೆಸೆದೆಸೆದು
ಬಾಯ್ತುತ್ತಕಸಿಕಸಿದು
ಕಡಲಾಚೆ ಕೊಂಡೊಯ್ವರೆಂದಿದ್ದೆವು;
ಬಿಳಿಜನರು ಹೋದಂದು
ನಮ್ಮವರೆ ಬಂದಂದು
ನಮಗಾಗ ಸುಖವೆಂದು ನಂಬಿದ್ದೆವು!

೩

ಬಿಳಿಜನರು ಹೋದಾಯ್ತು
ಕರಿಜನರು ಬಂದಾಯ್ತು
ನಂಬಿಗೆಯು ಹಂಬಿಗೆಯು ಹರಿದುಹೋಯ್ತು!
ಹೀಗಾದುದೇಕೆಂದು
ಕೇಳುವುದೆ ತಪ್ಪೆಂದು
ಕಣ್ಮುಚ್ಚಿ ಕುಳಿತಿನ್ನು ಬೇಸರಾಯ್ತು!! "

೪

ಎಂದೆನುತ ಬಿಸಿಯುಸಿರ
ಬಿಡಬೇಡಿ ಜನಗಳಿರ!
ಕಮರೀತು ಸ್ವಾತಂತ್ರ್ಯದೆಳೆಯ ಸಸಿಯು!
ತಾಳಿದಿರಿ! ತಾಳಿಸಿರಿ!
ತಾಳಿನಲಿ ಬಾಳಿಸಿರಿ!
ಇರೆ ಬೆಳೆಯೆ ಬೇಕು ನಲ್-ನೀರಹಸಿಯು!

೫

ಬಂದವರು ಒಲೆಹೂಡಿ
ತಿಂದುಂಡು ಹೊಲೆಮಾಡಿ
ಹೊರಟು ಹೋಗಿಹ ಹಾಳುಧರ್ಮಶಾಲೆ
ಈ ನಮ್ಮ ಬಿಡುಗಡೆಯು
ನಮಗಿಂದು ನಿಲುಗಡೆಯು
ಇದೆ ನಮ್ಮ ಕರುಳಿನಾ ಕೊರಳಮಾಲೆ!

೬

ಏರಿಳಿತ ಸರಿಮಾಡಿ
ಹೊಲಸೆಲ್ಲ ಹೊರದೂಡಿ
ನಮ್ಮ ಮನೆ—ಎನುವಂತೆ ಮಾಡಬೇಕು:
ಈ ಮನೆಯ ಮುತ್ತೈದೆ
ನಗುವಂತೆ ನಮ್ಮ ಎದೆ-
ಹೂಮಾಲೆ ಹೆಣೆದವಳಿಗಿಡಿಸಬೇಕು!

೭

ನಮ್ಮವರೆ ನಮಗಿರಲಿ
ಬೇರಾರು ಬರದಿರಲಿ
ನಮ್ಮವರ ಬಗೆಗಿರಲಿ ನಮಗೆ ಭಕ್ತಿ!

ಹಿಂದುಂಡಕಹಿಸಾಕು
ಇಂದೆಮಗೆಸಿಹಿಬೇಕು
ಶಾಶ್ವತದ ಪ್ರೇಮಸುಧೆ ನಮ್ಮ ಶಕ್ತಿ!

೮

ನಮ್ಮರವು ನಮಗಿಂದು
ನಮ್ಮ ಹೊರೆ ನಮಗಿಂದು
ಅದನಿಳುಹುವವರಾರು? —ತಿಳಿದು ಹೇಳಿ!
ಹೊಸಬಾಳು ಬರುತಲಿದೆ
ಹೊಸ ಒಸಗೆ ತರುತಲಿದೆ
ಕೈಕೆಸರ ಮಾಡಿ ಮೊಸರುಣ್ಣಲೇಳಿ!!

# ಜ್ಯೋತಿ ನಂದಿಹೋಯಿತೆ?

೧

ಜಗವನೆಲ್ಲ ಬೆಳಗುತಿರುವ
ಜ್ಯೋತಿ ನಂದಿ ಹೋಯಿತೆ?
ಶಾಂತಿಸುಧೆಯ ನದಿಯುಬತ್ತಿ
ಆರಟು ಬಂದುದಾಯಿತೆ?

೨

ಸತ್ಯ ಸೂರ್ಯ ಜಾರಿ ಕೆಳಗೆ
ಬಿದ್ದು ಕಾಣದಾದನೆ?
ಇಲ್ಲ ಕೋಟಿಸೂರ್ಯರಾಗಿ
ಒಡೆದು ಮೇಲೆ ಹೋದನೆ?

೩

ನಾಟ್ಯವಾಡಿ ತೆರೆಯಮರೆಗೆ
ಸರಿದು ಮಾಯವಾದನೆ?
ಇಲ್ಲಿ ಬಂದು ಎಲ್ಲರಾತ್ಮ—
ದೀಪ ಹಚ್ಚಿಹೋದನೆ?

೪

ಕೆಲಸ ಮುಗಿವಮುನ್ನ ಹೋದ
ಮರಳಿಬರುವನೆಂದಿಗೊ?
ಗ್ಲಾನಿಹೊದಿಕೆ ಹೊದ್ದು ಮಂದಿ
ನಿದ್ದೆಗೊಳುವ ಸಂದಿಗೊ??

೫

ಜಗದ ಜನರ ಕಣ್ಣನೀರ
ಕಡಲು ಮೊರೆಯತೊಡಗಿದೆ !
ಅದರ ಮೇಲೆ ನೋಡು ಅವನ
ಹೆಸರು ಹಡಗ ನಡೆದಿದೆ !

೬

ಈಚೆಯುವರನಾಚೆಗೊಯ್ದು
ಪಾರುಮಾಡಿ ಬಿಡುತಿದೆ !
ದೇವಸನ್ನಿಧಾನದಲ್ಲಿ
ಒಯ್ದು ಮುಕ್ತಿಗೊಡುತಿದೆ !

೭

ಏರು ಮೇಲೆ ಹತ್ತು ಬೇಗ
ಹೊತ್ತು ಮುಳುಗಲಿರುವುದು !
ಕಣ್ಣು ಕಾಣುವನಿತರಲ್ಲಿ
ಕುಳಿತು ಮುಂದೆ ನಡೆವುದು !!

# ಸಾಲದೇನೊಂದೆ ಮನುಜಜಾತಿ?

ಆ ಜಾತಿ ಈ ಜಾತಿ ಯಾವ ಜಾತಿಯದೇಕೆ
ತಾ ಸಾಲದೇನೊಂದೆ ಮನುಜ ಜಾತಿ?
ಆ ಧರ್ಮ ಈ ಧರ್ಮ ಯಾವ ಧರ್ಮವದೇನು
ದೊರೆತರಾಗದೆ ಶಾಂತಿ ಸತ್ಯ ಪ್ರೀತಿ?

ಈ ಜಾತಿಯಿಂದೇನು ಆ ಧರ್ಮದಿಂದೇನು
ಸಕಲರಿಗೆ ಸುಖತರುವುದಲ್ಲವೇನು?
ಸಂಪ್ರೀತಿ ಬೇಡೇನು ಸಕಲ ಜೀವಿಗಳಲ್ಲಿ?
ದಯವೆ ಇಲ್ಲದ ಧರ್ಮ ಧರ್ಮವೇನು?

ಸದ್ಧರ್ಮ ಜಾತಿಗಳ ಹೆಸರಿನಲಿ ನಡೆದಿರುವ
ರುಂಡಚಂಡಾಟಕೇನೆನ್ನಬೇಕೋ?
ಸದ್ಬುದ್ಧಿ ಇರದವರ ಗುದ್ದಾಟವೆನಬಹುದೊ?
ಇಲ್ಲ ಹುರಳಿಲ್ಲದಿಹ ಬರಿಯ ತೇಕೋ

ಆಕಳದ ಹೊರಬಣ್ಣ ಕಪ್ಪೇನು ಕೆಂಪೇನು
ಹಾಲುಂಟೆ ಕರಿಕೆಂಪು? ಕಣ್ಣು ಕುರುಡೆ?
ಧರ್ಮಗಳ ಮೇಲ್ಬಣ್ಣ ಬೇರಿದ್ದರೇನಂತೆ
ಒಳತಿರುಳು ತಾನೊಂದೆ ತಿಳಿದು ನೋಡೆ!

ದಯೆ ಶಾಂತಿ ನಯ ನೀತಿ ಸತ್ಯ ಪ್ರೀತಿಗಳೈಕ್ಯ
ಪ್ರತಿಧರ್ಮ ಜಾತಿಗಳ ಜೀವದುಸಿರು!
'ನುಡಿ ಸತ್ಯ, ನಡೆ ನೀತಿ, ಇಡು ಪ್ರೀತಿ, ಪಡೆ ಶಾಂತಿ!'
ಬೇಡೆತ್ತಬೇಡಾವ ಜಾತಿ ಹೆಸರು!

ಆ ಧರ್ಮ ಈ ಧರ್ಮ ಯಾವ ಧರ್ಮದೊಳೇನು
ದೊರೆತರಾಗದೆ ಶಾಂತಿ ಸತ್ಯ ಪ್ರೀತಿ?
ಆ ಜಾತಿ ಈ ಜಾತಿ ಯಾವ ಜಾತಿಯೊಳೇನು
ತಾ ಸಾಲದೇನೊಂದೆ ಮನುಜ ಜಾತಿ??

## "……ಈ ಬಾಳು ಹಾಳೆಂದು !"

೧

ಈ ಬಾಳು ಹಾಳೆಂದು
ಬರಿಗೋಳು ಗೋಳೆಂದು
ಹೇಳುವಾ ತತ್ವವನೆ ಹೂಳು ಹೂಳು !
ಬಂದದ್ದು ಬರಲೆಂದು
ಅದೆ ನನಗೆ ಸುಖವೆಂದು
ಸಾಹಸವ ತಳೆದಿಂದು ಏಳು ಏಳು !

೨

ಹುಟ್ಟಿದ್ದು ಸುಳ್ಳೇನು ?
ಸಾಯುವದು ಸುಳ್ಳೇನು ?
ನೀನಿಲ್ಲಿರುವದೇನು ಸುಳ್ಳು ಸುಳ್ಳೆ ?
ಹುಟ್ಟಿನಿಂ ಸಾಯ್ವವರೆ-
ಗಿಲ್ಲಿನೀಂ ಜೀವಿಸಿರೆ
ಆ ಜೀವ ಜೀವನಕೆ ಅರ್ಥವಿಲ್ಲೆ ?

೩

ನಾಕನರಕಗಳುಂಟೊ ?
ಜನ್ಮಜನ್ಮಗಳುಂಟೊ ?
ಉಂಟಾದರುಂಟು ಇಲ್ಲಾದರಿಲ್ಲ !
ಆ ಚಿಂತೆ ನಿನಗೇಕೆ ?
ಬರಿ ಭ್ರಮೆಯು ಸುಳ್ಳೆಣಿಕೆ
ಎಣಿಸೆಣಿಸಿ ಬೇಸತ್ತರಂತ್ಯವಿಲ್ಲ !

೨

ಪಾಪವಿರಲೇನಂತೆ
ಪುಣ್ಯ ಬರಲೇನಂತೆ
ಸುಖದುಃಖ ಹೊಂದುವವ ನೀನಲ್ಲವೆ ?
ನಾಕವಿದ್ದರು ಇರಲಿ
ನರಕ ಬಂದರು ಬರಲಿ
ನೀನೆ ಎಲ್ಲವನುಣ್ಣಬೇಕಲ್ಲವೆ ?

೩

ನಿನಗಾಗಿ ನೀನಿರುವೆ
ನೀನಾಗಿ ನೀನಿರುವೆ
ಅನ್ಯದೈವದ ಆಶೆ ಬೇಡ ಬೇಡ !
ನಿನೆಗಾಗಿ ನೀ ಹಿಗ್ಗು
ನೀನಾಗಿ ಮುನ್ನುಗ್ಗು
ಹಿಂದಿರುಗಿ ಹೊರಹೊರಳಿ ನೋಡಬೇಡ !

೪

ಹಿಂದೇನು ಮುಂದೇನು
ಇಂದೇನು ಎಂದೇನು
ಯಾರ್‍ಯಾರು ನಿನಗಿಲ್ಲ ನಿನಗೆ ನೀನು !
ಬಂದದ್ದನುಣಬೇಕು
ಸವಿಮಾಡಿಕೊಳಬೇಕು
ಒಲ್ಲೆನೆಂದರು ಕೂಡ ಬಿಡದು ಬೆನ್ನು !

೫

ಅತ್ತು ಉಂಬುದಕಿಂತ
ನಕ್ಕುಣ್ಣು ನೀನಂತ
ಹೇಳುವೆನು ನಾನೊಂದು ಹುರುಳ ಪಾಠ !

ಅಂಜಿ ಅತ್ತವರೆಲ್ಲ
ಸತ್ತು ಹೋಗಿಹರಲ್ಲ!
ಅಂಜದವ ತಾ ಸತ್ತು ಅಮರನಾದ!

೮

ಏನಾದರೇನಂತೆ
ಇದು ಬಾಳಿನಾ ಸಂತೆ
ದುಃಖಬಳಿಗೈತರಲು ಕೊರಗಬೇಡ!
ಇರುವೆರಡು ದಿನಗಳನು
ಹಿಗ್ಗಿನಲಿ ಕಳೆ ನೀನು
ಹಿಂದುಮುಂದಿನ ಚಿಂತೆ ಮಾಡಬೇಡ!

೯

ಈ ಬಾಳು ಹಾಳೆಂದು
ಬರಿಗೋಳು ಗೋಳೆಂದು
ಹೇಳುವಾ ತತ್ವವನೆ ಹೂಳುಹೂಳು!
ಬಂದದ್ದು ಬರಲೆಂದು
ಅದೆ ನನಗೆ ಸುಖವೆಂದು
ಸಾಹಸವ ತಳೆದಿಂದು ಏಳು ಏಳು!!

# ಅನ್ನದೇವರು

೧

" ಅನ್ನ ಬೇಕು ! ಅನ್ನ ಬೇಕು ! "
ಎನ್ನುತಿರುವೆ ಮಾನವ ;
ಅನ್ನದೇವರನ್ನೆ ತುಳಿದ
ಪಾಪಗೇಡಿ ದಾನವ !
ಕಲ್ಲುದೇವರನ್ನು ತಂದು
ಗುಡಿಯೊಳಿಟ್ಟು ಹಾಡುವೆ ;
' ಎಲ್ಲಿ ಇರುವ - ಅನ್ನದೇವ ? '
ಎಂದು ತಿಳಿಯಬೇಡವೆ ?
ಕಲ್ಲದೇವರಲ್ಲಿ ನಿನಗೆ
ಅನ್ನವೇನು ದೊರೆವುದೆ ?
ಇಲ್ಲದಲ್ಲಿ ಸಲ್ಲದನ್ನು
ಕಾಡಿ ಬೇಡಿ ದಣಿವುದೆ ?
ಕಲ್ಲಿನಲ್ಲಿ ದೇವರಿಲ್ಲ—
ವೆಂದು ನೀನು ಅರಿಯೆಯ ?
ಅಲ್ಲಿ ರೈತನಲ್ಲಿ ದೇವ—
ನಿರುವುದನ್ನು ಜರೆವೆಯ ??

೨

ಮುಂಜು ನಸುಕು ಹರಿಯುವಾಗ
ಮನೆಯ ಬಿಟ್ಟು ತೆರಳುವ
ಸಂಜೆ ಮುಸುಕು ಮುಚ್ಚಿದಾಗ
ಮನೆಗೆ ಮತ್ತೆ ಮರಳುವ.

ನೇಗಿಲಾಳ ಹೋಗಿ ನೋಡು
　　ಹೇಗೆ ಬಿಡದೆ ದುಡಿವನು !
ತ್ಯಾಗಿ ಕರ್ಮಯೋಗಿಯಾಗಿ
　　ತಪದಿ ತನುವ ಸುಡುವನು !
ಗಾಳಿ ಮಳೆಯು ಬಿಸಿಲು ಚಳಿಯು-
　　ನೆಂತು ಬಿಡದೆ ತಡೆವನು !
ಬಾಳ ಕೂಳ ದಾಳಿ ತಾಳಿ
　　ಜಗಕೆ ಜೀವ ಕೊಡುವನು !
ಅನ್ನದಾತ ತಾತನಾತ
　　ಹೋಗು ಅವನ ತಾಣಕೆ
ನನ್ನ ನಿನ್ನ ದೇವರಾತ
　　ಬೀಳು ಅವನ ಚರಣಕೆ !

೨

ಜಗವನೆಲ್ಲ ಉಣಿಸಿ ತಿನಿಸಿ,
　　ಯಾವನುಣದೆ ಇರುವನೊ,
ಸೊಗವಗೊಳಿಸಿ ಜಗವ ನಗಿಸಿ
　　ಯಾವ ಮೌನ ತಳೆವನೊ,
ಮನೆಯ ಮೇಲೆ ಮನೆಯ ಕಟ್ಟ-
　　ಲನುವು ಮಾಡಿಕೊಡುವನೊ,
ತನಗೆ ಹುಲ್ಲು ಗುಡಿಸಲಿಲ್ಲ—
　　ದಿರಲು ಸುಮ್ಮನಿರುವನೊ,
ಮಾನ ಮುಚ್ಚಿಕೊಳಲು ಜನಕೆ
　　ಹತ್ತಿ ಬಿತ್ತಿ ಕೊಡುವನೊ,
ತಾನೆ ಮಾನ ಕಳೆದುಕೊಂಡು
　　ಘಾವ ಬತ್ತಲಿರುವನೊ,

ಅವನೆ ತಿಲದ ಮರೆಯ ತೈಲ !
ಅವನೆ ನಿನ್ನ ದೇವರು !
ಅವನೆ ಎಲೆಯ ಮರೆಯ ಹಣ್ಣು !
ಅವನೆ ಅನ್ನ ದೇವರು !!

೪

ಎಲೆಯ ತಳ್ಳಿ ಹಣ್ಣ ತಿಂದು
ಅವನ ಕಾಣದಿರುವೆಯ ?
ತಿಲವ ಹಿಂಡಿ ಎಣ್ಣೆಯುಂಡು
ಅವನ ಮತ್ತೆ ಮರೆವೆಯ ?
ಹಿಂಡಿ ಹಿಂಡಿ ಉಳಿದ ಹಿಂಡಿ
ಕಂಡು ಮೂಗ ಮುರಿವೆಯ ?
ಉಂಡ ಮನೆಯ ಬಿದಿರನೆಣಿಸಿ
ಎರಡು ಬಗೆಯುತಿರುವೆಯ ?
ಸಾಲ ಶೂಲದಿಂದ ಚುಚ್ಚಿ
ಹಿಂಸೆಗೊಳಿಸುತಿರುವೆಯ ?
ಕಾಲಬುಡದ ಟೊಂಗೆಯನ್ನೆ
ಕಡಿದು ಬೀಳುತಿರುವೆಯ ?
ಬೇಡ ! ಬೇಗನರಿತುಕೊಳ್ಳು
ಹುಲ್ಲುಮನುಜನಲ್ಲವ !
ನಾಡ ಹೊರೆಯುಹೊತ್ತ ಧೀರ
ನಮ್ಮನುಳಿಸಬಲ್ಲವ !!

೫

ಅವನ ಬಿಸಿಯ ಉಸಿರಿಗಾಗಿ
ಬೆಳೆಯು ಬಣಗಿ ಹೋಗಿದೆ !

ಅವನ ಆಶೆ ಅಳಿಯಲಿಂದು
ಇಳೆಯು ಬಂಜೆಯಾಗಿದೆ!
ಅಂತು ಇಂತು ಅವನ ಶಕ್ತಿ
ತಿಳಿಯದಿಂತು ಆಗಿದೆ!
ಎಂತೊ ಏನೊ ಆಗಿ ಕೊನೆಗೆ
ಅನ್ನ ಸೊನ್ನೆಯಾಗಿದೆ!
ಹಸಿದು ನಿಂತ ನಿನಗೆ ಈಗ
ಅನ್ನದರಿವು ಆಗಿದೆ!
ಬಿಸಿಯು ಹತ್ತದಿರಲು ಬುದ್ಧಿ
ಬಾರದೆನುವ ಹಾಗಿದೆ!
ಆತ ರೈತ! ಅನ್ನದಾತ!
ಅವನೆ ಅನ್ನದೇವರು!
ಆತನುಳಿದು ಇನ್ನು ಯಾರು
ಜಗಕೆ ಜೀವದಾತರು??

೬

ಹೋಗು ಹೋಗು ಶಿರವಬಾಗಿ
ಕೈಯಮುಗಿದು ಕೇಳಿಕೊ!
ಬೇಗನೆನ್ನ "ಕ್ಷಮಿಸು ತಂದೆ—
ಕ್ಷಮಿಸು" ಎಂದು ಬೇಡಿಕೊ!
ಹೋಗಿ ಬಿಡಲಿ ಅವನ ಚಿಂತೆ
ಕರುಣೆ ಕಣ್ಣು ತೆರೆಯಲಿ!
ಸಾಗಿ ಬರಲಿ ಶಾಂತಿ ಬಳಿಗೆ
ಮೊಗವು ನಗುವ ತಾಳಲಿ!
ನಗುವ ಮಗನ ಮೊಗವ ನೋಡಿ
ಭೂಮಿತಾಯಿ ಹಿಗ್ಗಲಿ!

ನೊಗನ ಹೊತ್ತು ಬಸವಭೂಪ
ಕೂರಿಗೂರಿ ಜಗ್ಗಲಿ !
ಮುತ್ತಿನಂತ ತೆನೆಯ ಹೊತ್ತು
ಪೈರದಂಡು ಕುಣಿಯಲಿ !
ಎತ್ತ ನೋಡಿದತ್ತಲೆಲ್ಲ
ಅನ್ನರಾಶಿಯಾಗಲಿ !!

೨

“ ಕೂಳು ! ಕೂಳು ! ಕೂಳು ! ” ಎನುವ
ಜನದ ಹೊಟ್ಟೆ ತಣಿಯಲಿ !
ಬಾಳಿನಲ್ಲಿ ಚೆಲುವು ನಲಿವು
ಗೆಲುವು ತುಂಬಿ ಕುಣಿಯಲಿ !
ಅನ್ನದೇವರನ್ನು ಕರೆದು
ಹೊನ್ನ ಹಸೆಯನೇರಿಸು !
ನೀನು ಅವನ ಪೂಜೆಗೈದು
ವಿಜಯ ಭೇರಿ ಬಾರಿಸು !
ನಾಡಗುಡಿಯ ಹಾರಿಸು !!

# ಹಿಂದುಳಿದು ಹುರುಳಿಲ್ಲ !

೧

ಮುಂದೋಡು ಮುಂದೋಡು
ಹಿಂದಿರುಗಿ ನೋಡದೆಯೆ !
ಮುಂದೇಕೆ ಹಿಂದೇಕೆ ?—
ಎಂದುಸಿರು ಹಾಕದೆಯೆ !
ಕಲ್ಲಿರಲಿ ಮುಳ್ಳಿರಲಿ
ಮುನ್ನುಗ್ಗು ಮುಂದೆಯೇ !
ಬಂದಿರಲಿ ನಿಂದಿರಲಿ
ಯಮ ನಿನ್ನ ಹಿಂದೆಯೇ !!

೨

ಕಣ್ತೆರೆದು ನೋಡಲ್ಲಿ
ಮುಂದಿರುವುದೇನೆಂದು
ಬಂದುದಕೆ ಎದೆಗೊಟ್ಟು
ಗಂಡುಗಲಿಯಾಗಿಂದು !
ಮುಂದಿಹುದು ನಿಂದಿಹುದು
ಅನ್ಯಾಯದಾ ಜಾಲ
ಅದರೊಳಗೆ ಸಿಕ್ಕಿಹವು
ಜೀವಿಗಳು ಬಹುಪಾಲ !
" ಈ ನರಕ ಹಿಂಸೆಯನು
ಬಿಡಿಸುವವರಾರಿಲ್ಲೆ ?
ಹಾ ! ಎಮ್ಮ ಬಂಧುಗಳೆ
ಬಲಿ ಬಿದ್ದಿರಿಗೊ ಇಲ್ಲೆ ! "
ಎಂದೊರಲಿ ಕೈಮಾಡಿ

ಕರೆಯುತಿಹರಗೊ ನೋಡು!
ಇಂತೇಕೆ ನೋಡುವಿಯೊ
ನಡೆಬೇಗ ಮುಂದೋಡು!
ಅಕೋ! ನೋಡು ನೋಡಲ್ಲಿ
ಕಾಂಬುವುದು ಆ ಚಿತ್ರ
ನಮ್ಮ ಜನಜಂಗುಳಿಯು
ಹದಗೆಟ್ಟ ಹೋಲಿ ಚಿತ್ರ !!

೩

ಇದೊ ಹೊಟ್ಟೆಗಿಲ್ಲೆಂದು
ಹೊರಳಾಡುತಿಹರಿಲ್ಲಿ !
ಅದೊ ತಿಂದು ಹೆಚ್ಚಾಗಿ
ತಳಮಳಿಸುತಿಹರಲ್ಲಿ !
ಸಿಟ್ಟಿಸಿರಿನುರಿಯನ್ನು
ಉಗಳುತಿಹನಾ ತರುಣ
ಕೆರೆಯಲ್ಲಿ ಈ ತರುಣಿ
ಇಕೊ ! ಇಲ್ಲಿ ದುರ್ಮರಣ !
ಸವತಿಯಾ ಮತ್ಸರದಿ
ಹಲುಕಡಿವಳಾಸಧವೆ
ಕಣ್ಣೀರ ಹೊಳೆಯನ್ನು
ಹರಿಸುತಿಹಳೀ ವಿಧವೆ !
ಮುದಿವರನ ಜೊತೆಗಿರುವ
ಹನ್ನೆರಡರಾವಧುವೆ
ವ್ಯಭಿಚಾರದರಮನೆಯ
ಹಿರಿವೇಶ್ಯೆ ಕೈಯೊಡವೆ !

ಇಮ್ಮುಖದ ಸತಿಪತಿಯು
ಇಜ್ಜೋಡಿನಾ ಬಾಳ್ವೆ
ಹೊಳೆಯಲ್ಲಿ ಮುಳುಗುತಿಹ
ಒಡಕಾದ ಈ ನಾವೆ !

೪

ಜಾತಿಗಳ ಜಂಜಾಟ-
ವದ ನೋಡಲಾಸಲ್ಲ !
ಕೂಗಾಟ ಬೊಬ್ಬಾಟ-
ವಿದ ಕೇಳುಕೇಳಲ್ಲ !
ಹರಿಜನರ ಆ ಹಿಂಡು
ಕುಲಗೆಟ್ಟು ಕುಣಿಯುತಿದೆ !
ಹಿರಿಜನರ ಈ ತಂಡು
ತೂಕಡಿಸಿ ಬೀಳುತಿದೆ !
ಹಿಂದುಗಳ ನೋಡಲ್ಲಿ
ಮುಸ್ಲೀಮರಿಗೊ ಇಲ್ಲಿ
ರುಂಡಗಳ ಚೆಂಡಾಡಿ
ನೆತ್ತರಿನ ಹೊಳೆಯಲ್ಲಿ
ಮುಳುಮುಳುಗಿ ಸಾಯುವರು
ಮೇಲೆತ್ತಲಾರಿಲ್ಲ
ಸುತ್ತಾರ ಸುಳಿವಿಲ್ಲ
ಮುಂದೋಡಿ ಉಳಿಸಲ್ಲ !
ಮುದಿಗೂಬೆಗಳೆನುವುವು :
" ನಮಗೇಕೆ ಆಗೊಡವೆ ? "
ನಡೆ ಓಡು ನವತರುಣ
ಸುಳ್ಳೇಕೆ ನೀ ತಡೆವೆ !

ತರುಣರಾ ಮುನ್ನಡೆಗೆ
ಮಾರ್ಗವನು ಮಾಡಲ್ಕೆ
ವಿಧವೆಯರ ಸಧವೆಯರ
ಯಾತನೆಯ ಬಿಡಿಸಲ್ಕೆ
ಜಾತಿಯಾ ಭೂತವನೆ
ಹೊಡೆದಾಚೆ ಹಾಕಲ್ಕೆ
ನೀತಿಯಾ ದೇವರನೆ
ನೆಲೆಯಾಗಿ ನಿಲಿಸಲ್ಕೆ
ಹತ್ತಾಗಿ ಹರಿದವರ-
ನೊಂದಾಗಿ ಮಾಡಲ್ಕೆ
ಕೈಯೊಳಗೆ ಕೈಯಿರಿಸಿ
ಮುನ್ನಡಿಯನಿಡಿಸಲ್ಕೆ
ಹೋಗಿಹರು ತ್ಯಾಗಿಗಳು
ಮುಂದೋಡಿ ಅವರಿಡೆಗೆ
ಬೆಂದಿರುವ ನೊಂದಿರುವ
ಮಾನವರ ಬಳಿಬಳ್ಳಿಗೆ !
ಮುರಿಯುವರು ಹರಿಯುವರು
ಅನ್ಯಾಯದಾ ಜಾಲ !
ತರಿಸುವರು ಬರಿಸುವರು
ಸವಿಸುಖದ ಹೊಂಗಾಲ !!

೬

ಮುಂದಿರುವ ಮುಂದೆಯನು
ಕೂಡಲಿಕೆ ನಡೆಮುಂದೆ !

ತ್ಯಾಗಿಗಳ ಬಗೆಯಲ್ಲಿ
　　ಸಾಗಲಿಕೆ ನಡೆ ಮುಂದೆ !
ನಡೆ ಬೇಗ ನಡೆ ಬೇಗ
　　ತಡಮಾಡಿ ಫಲವಿಲ್ಲ !
ಓಡೋಡು ಮುಂದೋಡು
　　ಹಿಂದುಳಿದು ಹುರುಳಿಲ್ಲ !!

# ದೀವಟಿಗೆ ಹೊತ್ತಿಹುದು

ದೀನರನು ದಲಿತರನು ಕೀಳೆಂದು ಕೆಳಮೆಟ್ಟಿ
    ಕುಣಿವ ಸಿರಿಮದವೆ ತುಸು ತಿಳಿದು ನೋಡು!
ಬಡಜನರ ಒಡಲುರಿಯು ದೀವಟಿಗೆ ಹೊತ್ತಿಹುದು
    ಅಗೊ ಬಂತು ಮೈಮೇಲೆ ಓಡು ಓಡು!

ಕಸದ ರಸವನೆ ಹೀರಿ ಗಿಡದ ತಲೆಯನೆ ಏರಿ
    ನಗುತಿರುವ ಎಲೆ ಹೂವೆ ಕೇಳು ನೀನು!
ಇದೊ ಈಗ ಕೆಳಗುರುಳಿ ಕಸದೊಳಗೆ ಕಸವಾಗಿ
    ಹುಡಿಗೂಡಲಿರುವೆ ಹಾ! ತಿಳಿಯದೇನು?

ಗೊಬ್ಬರದ ರಸವೀಂಟಿ ಕೊಬ್ಬಿ ಬೆಳೆದಾ ಕಬ್ಬೆ.
    ಗೊಬ್ಬರದ ಮೇಲೆ ಅಬ್ಬರವದೇಕೆ?
ಗಬ್ಬದೊಳಗಿನ ಕೊಬ್ಬು ಕಳೆದೊಡನೆ ಎಲೆ ಕಬ್ಬೆ.
    ಗೊಬ್ಬರವೆ ನೀನಾಗಲಿರುವೆ ಜೋಕೆ!

ಬಡಜನರ ಬಾಯ್ತುತ್ತ ಕಸಿದುಂಡು ಬೆಳೆದಿರುವ
    ಸಿರಿವಂತ ಹಿರಿಹೊಟ್ಟೆ, ಎಚ್ಚರಾಗು!
ಕೋಟೆ ಮನೆಗಳ ಕೆಡಹಿ ಮುಗಿಲ ಮುಟ್ಟಿದ ಮಹಲೆ,
    ಸಿಡಿಲೆರಗಲಿಹುದು ತಲೆ ಬಾಗು ಬಾಗು!

ದೀನರನು ದಲಿತರನು ಕೀಳೆಂದು ಕೆಳಮೆಟ್ಟಿ
    ಕುಣಿವ ಸಿರಿಮದವೆ ತುಸು ತಿಳಿದು ನೋಡು!
ಬಡಜನರ ಒಡಲುರಿಯು ದೀವಟಿಗೆ ಹೊತ್ತಿಹುದು
    ಅಗೊ ಬಂತು ಮೈಮೇಲೆ ಓಡು ಓಡು!!

# ಮರಣದ ಮಾತನ್ನೆತ್ತಿದಕೂಡಲೆ

೧

ಮರಣದ ಮಾತನು ಎತ್ತಿದ ಕೂಡಲೆ
ಭೀತಿಯ ಭೂತವು ಬಡಿಯುವದು ;
ಗಡಗಡ ನಡುಗುವುದಾಗಳೆ ದೇಹವು
ಕಣ್ಣೀರ್ಕಾಲುವೆ ಹರಿಯುವದು !
ಬೊಬ್ಬೆಯ ಅಬ್ಬರ ಕೇಳುವದು !

೨

ಮರಣದ ಮಾತನು ಎತ್ತಿದ ಕೂಡಲೆ
ಇಲ್ಲದ ಹುಚ್ಚದು ಹಿಡಿಯುವದು ;
ತಪ್ಪಿಸಿಕೊಳ್ಳುವ ಹಾದಿಯು ಹುಡುಕಲು
ಕಣ್ಣಿಗೆ ಕಂಡೆಡೆಗೋಡುವದು !
ಮಾಡದ ಕೆಲಸವ ಮಾಡುವದು.

೩

ಮರಣದ ಮಾತನು ಎತ್ತಿದ ಕೂಡಲೆ
ಆಶಾಪಾಶವು ಹರಿಯುವದು !
ಹೆಣ್ಣಿನ ಹೊನ್ನಿನ ಮಣ್ಣಿನ ಮೋಹವು
ತನ್ನಿಂತಾನೆಯೆ ಅಳಿಯುವದು !
ಬೇಸರ ಬಳಿಯಲಿ ಸುಳಿಯುವದು !

೪

ಮರಣದ ಮಾತನು ಎತ್ತಿದ ಕೂಡಲೆ
ಭಕ್ತಿಯು ಸೆಳೆನಿಂಚಾಡುವದು ;

ದೇವರು ನೆನಪಿಗೆ ಬರುವನು ಒಡನೆಯೆ
ನಾಸ್ತಿಕ ವಾದವು ಓಡುವದು !
ಆಸ್ತಿಕ ಭಾವವು ಮೂಡುವದು !

೫

ಸಂಕಟ ಬರದಿರೆ ವೆಂಕಟರಮಣನ
ಗೊಡವೆಯದೇತಕೆ ಹೇಳಯ್ಯ !
ಮರಣದ ಹೆದರಿಕೆಯಲ್ಲಿಯೆ ದೇವರು
ಮನೆಮಾಡಿರುವನು ಕೇಳಯ್ಯ !
ನೆಲೆಯಾಗಿರುವನು ನೋಡಯ್ಯ !!

# ಸುಖವೆಲ್ಲಿ ? ? ?

೧

ಹಿರಿತನದಿ ಸುಖವುಂಟೆ ಕಿರಿತನದಿ ಸುಖವುಂಟೆ
ಸುಖವೆಲ್ಲಿ ಸುಖವೆಲ್ಲಿ ಹೇಳುತಂದೆ ?
ಸಿರಿತನದಿ ಸುಖವುಂಟೆ ಬಡತನದಿ ಸುಖವುಂಟೆ ?
ಸುಖವಿರುವ ತಾವೆಲ್ಲಿ ತಿಳಿಸು ಎಂದೆ !

೨

ಸಿರಿವಂತರಾಗಿಂದು ಕಣ್ಣೀರನಿಡದವರು
ಎಷ್ಟು ಜನರುಂಟು ಈ ಲೋಕದಲ್ಲಿ ?
ಬಡತನವೆ ಸಾಕೆಂದು ಸುಖವಾಗಿ ಇರುವವರ
ಕಾಣಬಹುದೇನು ಈ ಮನುಜರಲ್ಲಿ ?

೩

ಇಡಿ ದಿವಸ ದುಡಿದುಡಿದು ಹಿಡಿಯನ್ನ ಪಡೆಯದಲೆ
ಕಡುನೊಂದು ಬೆಂದವಗೆ ಸುಖವಿರುವುದೆ ?
ಒಡಲುರಿಯ ಕಿಚ್ಚಿನಲಿ ಮಡದಿಮಕ್ಕಳೊಡನೆಯೆ
ಸುಡುಸುಡುತ ಮಡಿವವಗೆ ಸುಖವಿರುವುದೆ ?

೪

ಹೊಟ್ಟೆ ಹರಿಯುವ ವರೆಗೆ ಕುಳಿತುಂಡು ಕರಗಿಸದ
ರೋಗಿ ಸಿರಿವಂತನಿಗೆ ಸುಖವಿರುವುದೆ ?
ಮಡದಿಮಕ್ಕಳ ಚಿಂತೆ ಸಾವುನೋವಿನ ಚಿಂತೆ
ಕಳ್ಳಕಾಕರ ಚಿಂತೆ ಸುಖ ತರುವುದೆ ?

೫

ಬಡತನದ ಸೊತ್ತಲ್ಲ ಸಿರಿತನದ ಸೊತ್ತಲ್ಲ
ಸುಖವೆಂಬುದನುಭವಿಸುವವರ ಸೊತ್ತು !
' ಸಿರಿತನದಿ ಸುಖವುಂಟು ಬಡತನದಿ ಸುಖವಿಲ್ಲ '
ಎಂಬವಗೆ ಸುಖದ ತಿರುಳೇನು ಗೊತ್ತು !

೬

ನೋವು ನೆರೆನಿಂದಿರಲಿ ಸಾವು ಬಳಿಬಂದಿರಲಿ
ಸುಖವುಂಟು ನಗೆಮೊಗದ ತಾಳ್ಮೆಯಲ್ಲಿ !
ಸಿರಿಯಿರಲಿ ಇರದಿರಲಿ ದೊರೆ ನಿನ್ನ ನಂಬಿದರೆ
ಸುಖವುಂಟು ಸುಖವುಂಟು ಶಾಂತಿಯಲ್ಲಿ !!

# " ಅಕ್ಕ—ತಂಗಿ "

೧

ತಂದೆಯವರು ಬಂದುಕಳುಹಿ
    ನಿನ್ನೆ ಮರಳಿ ಹೋದರು !
ಅತ್ತೆಮಾವಂತ ಕೇಳಿಹೇಳಿ
    ಬಿಟ್ಟು ದೂರವಾದರು !
ಆಗ ನಾನು ಸಣ್ಣ ಹುಡುಗಿ
    ನನ್ನ ಮದುವೆಯಾಯಿತು !
ಈಗ ಇಲ್ಲಿ ನಲ್ಲನಾರೊ ?
    ನನಗೆ ತಿಳಿಯದಾಯಿತು !

೨

ಹೊತ್ತುಮುಳುಗಿ ಕತ್ತಲಾಯ್ತು
    ಬರಲಿ ಇಲ್ಲ ನಲ್ಲನು !
ನಿದ್ರೆ ಇರದ ಇರುಳು ಕಳೆದೆ
    ಹೇಳಲಾರಿಗೆಲ್ಲನು !
ಅತ್ತೆಯಾಜ್ಞೆಯಂತೆ ಇಂದು
    ಹೋದೆ ಹೊಳೆಯ ನೀರಿಗೆ !
ಓರಗಿತ್ತಿಯೋರ್ವಳಲ್ಲಿ
    ಎಂದಳೊಂದೆ ಬಾರಿಗೆ ! :

೩

" ಬೇರೆ ಚೆಲುವೆಯೋರ್ವಳಲ್ಲಿ
    ನಿನ್ನ ನಲ್ಲನಿರುವನು ;

ಅವಳನುಳಿದು ಹಳ್ಳಿ ಹುಡುಗೆ,
ನಿನ್ನ ಬಳಿಗೆ ಬಾರನು!"
ಮಾತುಕೇಳಿ ಮೌನವಾಂತೆ
ಕಣ್ಣುಮುಚ್ಚಿ ನೋಡಿದೆ!
ತಾಳ್ಮೆತಂದು ತೂಗಿ ನೋಡಿ
ಮರಳಿ ಮಾತನಾಡಿದೆ!:

೪

ಇರಲಿ ಇರಲಿ ಅಲ್ಲೆ ಇರಲಿ
ಅದುವೆ ನನ್ನ ಭಾಗ್ಯವು!
ಗಂಗೆಗೌರಿಯಂತೆ ನಾವು
ಅಕ್ಕತಂಗಿಯಾದೆವು!!

# ಮಾಯಿಗೆ

ಯಾವದೊಂದು ನೆವದಹಿಂದೆ
ಜೀವವನ್ನು ಜೋಕೆಯಿಂದೆ
ಕಾವವಸ್ತುವಾವುದೆಂದೆ ?

ನಾರಿ ವೇಷಧಾರಿಯಲ್ಲಿ
ನೂರು ಪರಿಯ ಸೋಗಿನಲ್ಲಿ
ಮೀರಿ ಮೆರೆವ ಮಾಯೆಯಲ್ಲಿ ?

ಹೊಟ್ಟೆಯಲ್ಲಿ ಇಟ್ಟುಕೊಂಡು
ಎಷ್ಟೊ ಏನೊ ಕಷ್ಟವುಂಡು
ಹುಟ್ಟಿಸಿರುವೆ ಎನ್ನನಿಂದು !

ಮೋಹಮಾಡಿ ಮೊಲೆಯಕುಡಿಸಿ
ಕಾಯವನ್ನು ಕಾಯ್ದು ಬೆಳೆಸಿ
ತಾಯಿಯಾಗಿ ಪೊರೆದೆ ಹರಸಿ !

ಸಣ್ಣ ಹುಡುಗನೆಂದು ಅನ್ನ-
ಹಣ್ಣುಹಾಲು ಉಣಿಸಿ ನನ್ನ
ಕಣ್ಣು ತೆರೆಯಲಿಲ್ಲೆ ಮುನ್ನ !

ಹರೆಯ ಬಂದು ಮೆರೆಯುವಾಗ್ಗೆ
ಸರಸವೆಲ್ಲ ಸುರಿದೆ ನನಗೆ
ನೆರೆತು ಬೆರೆತು ನಾರಿಯಾಗಿ !

ಹಣ್ಣುಮುದುಕನಾಗಿ ನಾನು
ಮಣ್ಣುಗೂಡ್ವ ಮೊದಲಿಗಿನ್ನು
ಸಣ್ಣ ಸೊಸೆಯು, ಸಲಹು ನೀನು !

## ಛಾಯಾ ಮಂದಿರ

ಕಣ್ಣು ಕಾಣುವಂಥ ಥಳಿಯೆ
ಬಣ್ಣ ಬಣ್ಣ ಸೊಬಗ ಸಿರಿಯೆ
ಹೆಣ್ಣೆ ಇಹುದು ಎಲ್ಲವರಿಯೆ!

ನಾದ ಊದಿ ಆದೆ ನೀನು :
ಹಾದಿಗೆಲ್ಲ ಆದಿ ನೀನು !
ಆದಿಯಲ್ಲೆ ಶಕ್ತಿ ನೀನು !

ಸಾವನೋವ ಮರೆಗೆ ಸರಿಸಿ
ಭೂಮಿಯಲ್ಲಿ ಬದುಕನಿರಿಸಿ
ಪಾವನಾದೆ ದೇವನರಸಿ !

ಸಣ್ಣ ವಸ್ತು ನೀನು ಅಲ್ಲ !
ಕಣ್ಣು ಆದೆ ಬಾಳಿಗೆಲ್ಲ !
ಹೆಣ್ಣೆ, ನೀನು ಧನ್ಯಳಲ್ಲೆ !!

# ನಾಚಿಕಬುರಕಿ

ಏನು ಮೆಚ್ಚುಮಾಡಿದೆ
ನನಗೆ ಹುಚ್ಚುಹಿಡಿಸಿದೆ !

೧

ಕೈಯಕ್ಕೈಯ ಹಿಡಿದುಕೊಂಡು
ನನ್ನ ಕೂಡ ತಿರುಗದೆ
ಮೈಗೆ ಮೈಯ ತಾಗಿಸುತ್ತ
ಮನೆಯ ಹೊರಗೆ ಬಾರದೆ
ಅಕ್ಕಪಕ್ಕದಲ್ಲಿ ಕುಳಿತು
ನಕ್ಕು ಮಾತನಾಡದೆ
ಹಾವಭಾವ ಸೋಗುಮಾಡಿ
ಕಾಮಕೇಳಿಯಾಡದೆ ||

ಏನು ಮೆಚ್ಚುಮಾಡಿದೆ
... ನನಗೆ ಹುಚ್ಚುಹಿಡಿಸಿದೆ !

೨

ವೇಷಭಾಷೆ ತೆರೆಯಮರೆಯ
ಸುಳ್ಳುಸೋಗು ಮಾಡದೆ
ಒಳಗು ಹೊರಗು ಒಂದೆಯಾದ
ಅಚ್ಚುಮೆಚ್ಚ ನೀಡಿದೆ !
ಪ್ರೀತಿಬಿಚ್ಚಿ ಬೈಲಿಗಿಟ್ಟು
ಅಗ್ಗಮಾಡಲಾರದೆ

ನಾಚಿನಾಚಿ ಒಳಗೆ ಮುಚ್ಚಿ
　　ಅದರ ಬೆಲೆಯ ತೋರಿದೆ !

　　　　ಏನು ಮೆಚ್ಚುಮಾಡಿದೆ
　　　　ನನಗೆ ಹುಚ್ಚು ಹಿಡಿಸಿದೆ !

೩

ಶಬ್ದವಿಲ್ಲದಂಥ ಮೌನ
　　ಭಾವ–ಭಾಷೆ ನಿನ್ನದೆ ?
ಮಾತಿನಾಚೆ ಮಾತನೆಲ್ಲ
　　ಮೌನ ನುಡಿಯು ಬಲ್ಲದೆ !
ಅಳಲನಳಿದು ನಗೆಯು ನುಂಗಿ
　　ಮೊಗವು ಮೌನವಾಗಿದೆ !
ಭಕ್ತಿ ತುಂಬಿ ನಮ್ರವಾಗಿ
　　ನಾಚಿ ಕೆಳಗೆ ಬಾಗಿದೆ !

　　　　ಏನು ಮೆಚ್ಚುಮಾಡಿದೆ ?
　　　　ನನಗೆ ಹುಚ್ಚುಹಿಡಿಸಿದೆ !!

# ಯಾರು ಹೆಚ್ಚು ?

ಬಾರೆ ನಾರಿ ಪ್ರೇಮಬೀರಿ
ಈರ್ವರೊಂದುಗೂಡುವ !
ಒಲಿದು ನಲಿದು ಕುಣಿದು ಮಣಿದು
ಅಮರ ಗಾನ ಹಾಡುವ !! ‖ ಪಲ್ಲ ‖

೧

ನಾನು ಹೆಚ್ಚೊ ನೀನು ಹೆಚ್ಚೊ
ಎಂದು ಕೇಳ ಬಲ್ಲೆವೆ ?
ಹೆಚ್ಚುಕಡಿಮೆ ಎಂಬುದೆಲ್ಲ
ಹುಚ್ಚರಾಟವಲ್ಲವೆ ?
ನಾಣ್ಯದೆರಡು ಮೈಗಳಲ್ಲಿ
ಹೆಚ್ಚುಕಡಿಮೆಯಾವುದು ?
ನಿನ್ನವೆರಡು ಕೈಗಳಲ್ಲಿ
ಹಿರಿದುಕಿರಿದು ಯಾವುದು ?
ಒಡೆದ ಕಡಲೆಕಾಳಿನಾವ
ಬೇಳೆ ದೊಡ್ಡದೆನ್ನಲಿ ?
ಕಡಿದ ಕೊಬರಿ ಸೀಳಿನಾವ
ಹೋಳು ಕೀಳವೆನ್ನಲಿ ?
ಆಡಿನೆರಡು ಮೊಲೆಗಳಲ್ಲಿ
ಮೇಲುಕೀಳುವಾದವೆ ?
ಈಶನಮಲ ಪಾದಕಮಲ-
ದ್ವಯಗಳಲ್ಲಿ ಭೇದವೆ ??

೨

ಪ್ರೇಮದಮರ ಬಾಹುಗಳಲಿ
ನಾನು ನೀನು ಬಂಧಿಸಿ

ಎದೆಗೆ ಎದೆಯು ಹೊಂದಿಸುತ್ತ
ತುಟಿಗೆ ತುಟಿಯು ಸಂಧಿಸಿ
ಬೆಸೆದು ಒಂದೆಯಾದ ಮೇಲೆ
ನಾನು ನೀನು ಎನುವುದೆ ?
ಎಂದರೆಮ್ಮ ಬೆಸುಗೆ ಬಿರಿದು
ಬೇರೆ ಬೇರೆಯಾಗದೆ ?
ಕಾಳನೆರಡು ಬೇಳೆಗಳಲಿ
ಒಂದೆ ಬಿತ್ತಿ ಬೆಳೆವರೆ ?
ಎರಡು ಕಣ್ಣುಗಳಲಿ ಒಂದು
ಮುಚ್ಚಿ ಒಂದು ತೆರೆವರೆ ?
ಬಾಳಗಾಡಿ ಸಾಗಬಹುದೆ
ಗಾಲಿಯೊಂದು ಸರಿದರೆ ?
ನೀನೆ ಹೇಳು ನಡೆಯಬಹುದೆ
ಕಾಲು ಒಂದು ಮುರಿದರೆ ??

೨

ನನ್ನ ಮೇಲ್ಮೆ ಕೀಳ್ಮೆಗಳಲಿ
ನೀನು ಪಾಲುಗೊಂಡಿರೆ
ನಿನ್ನ ಕಷ್ಟ ಸುಖಗಳಲ್ಲಿ
ನಾನು ಹೊಂದಿಕೊಂಡಿರೆ
ಮೇಲ್ಮೆ ಕೀಳ್ಮೆ ಎಂಬುವೆಲ್ಲ
ನುಡಿಯು ಸಂತೆಯಲ್ಲವೆ ?
ಅದರ ನಾದ ಒಂದೆಯಾದ
ಗುಡಿಯು ಘಂಟೆಯಲ್ಲವೆ ?
ನಾನು ಬೇರೆ ನೀನು ಬೇರೆ
ಎಂದು ವಾದ ಮಾಡದೆ

ಒಂದೆ ಒಂದೆಯಾದರಿಂದೆ
ಸಗ್ಗ ಸೂರೆಯಾಗದೆ ?
ಅಲ್ಲಿ ನಮ್ಮ ನಲ್ಮೆಬೀಜ
ಮೊಳಕೆಯೊತ್ತಲಾರದೆ ?
ನನ್ನ ನಿನ್ನ ಬಾಳಬಳ್ಳಿ
ಚಿಗಿತು ಹಬ್ಬಲಾರದೆ ??
ಬಾರೆ ನಾರಿ ಪ್ರೇಮ ಬೀರಿ
ಈರ್ವರೊಂದುಗೂಡುವ !
ಒಲಿದು ನಲಿದು ಕುಣಿದು ಮಣಿದು
ಅನುರಗಾನ ಹಾಡುವ !!

## ......................ಬರುವಳು

ಬರುವಳಿಂದು ಬರುವಳು
ಬರುವಳಿಂದು ಬರುವಳು !

ಜೊನ್ನ ಕಿರಣ ಹೊನ್ನ ಹೋಳಿಯೊ-
ಳೀಸಿ ಈಸಿ ಬರುವಳು
ತವರಿನಿಂದ ತೇರನೇರಿ
ತೂರಿ ಹಾರಿ ಬರುವಳು !

ಊರಿನಿಂದ ಬರುವಳು
ದೂರಿನಿಂದ ಬರುವಳು !

ಬಹಳ ದಿನಗಳನ್ನು ಕಳೆದು
ಮಧುರ ಮಧುರ ಪ್ರೈಯ ತಳೆದು

ಸೊಬಗರಾಣಿ ಬರುವಳು !

ಆರು ತಿಂಗಳಾದ ಮೇಲೆ
ನನ್ನನಗಲಿ ಹೋದಮೇಲೆ

ಮರಳಿ ಇಂದು ಬರುವಳು !
ತವರಿನಿಂದ ಬರುವಳು
ತಾರೆ ಮುತ್ತ ತರುವಳು !

ಹೂವು ಹಣ್ಣು ಹಾಲು ಜೇನ
ನನ್ನ ಚೆಲುವ ಚಿನ್ನರನ್ನ

ಮುಗುವನೊಡನೆ ತರುವಳು !
ಬರುವಳಿಂದು ಬರುವಳು !
ಬರುವಳಿಂದು ಬರುವಳು !!

# ಕೋಗಿಲೆಗೆ

೧

ನಮ್ಮ ಜನ್ಮಭೂಮಿಗಾಗಿ
ಚೈತ್ರ ಬಂದಳಿಂದು ಸಾಗಿ
ಎಂದು ಕೂಗುತಿರುವೆಯು ?

ಚಳಿಯುವಾಗಿ ಬಿಸಿಯುತಾಗಿ
ಹೊರಟುಹೋದಳೀಳು ಸೀಗಿ
ಎಂದು ಸಾರುತಿರುವೆಯು ?

೨

ಬೆಳಕು ಬೆಳಗಿ ಬರುವ ಮುನ್ನ
ಕಾಳಕತ್ತಲಿರುವುದನ್ನ
ಅರಿಯದಿರುವೆ ಕೋಗಿಲೆ !

ಶಾಂತಿ ಇಳಿದು ಬರುವ ಮುನ್ನ
ಕ್ರಾಂತಿಯಾಗಲಿರುವುದನ್ನ
ಮರೆಯುತಿರುವೆ ಕೋಗಿಲೆ

೩

ಹಳತು ಕೊಳೆತು ಹೋಗುವಾಗ
ಕೇಳ್ವರಾರು ನಿನ್ನ ರಾಗ ?
ಚಣವೆ ತಾಳು ಕೋಗಿಲೆ !

ಹೊಸತು ಚಿಗಿತು ಬರಲಿ ಬೇಗ
ಹಾಡು ಸೂರೆಗೊಳಿಸು ಆಗ
ತಡೆವರಾರು ಕೋಗಿಲೆ !

೪

ಚಿಗುರು ಚಿಗರಿ ಚಿಗಿದು ನೆಗೆದು
ಅಮರಕೇಳಿಯಾಡಬಹುದು—
ನಿನ್ನ ಕೂಗು ಕೇಳಲು !

ಮೊಗ್ಗೆ ಮೊಗವು ಹಿಗ್ಗಿ ಬಿರಿದು
ಸಗ್ಗ ಸುರಭಿ ಸುರಿಯಬಹುದು—
ಜಗವೆ ಉಂಡು ತಣಿಯಲು !!

# ಬೆಳ್ಳಿ

ತಿಳಿಯ ನೀಲ ಕಡಲ ಹೋಲ್ವ
ಮುಗಿಲಿನಲ್ಲಿ ಮೂಡುವೆ!
ಬೆಳಗಿ ತೊಳಗಿ ಬೆಳಗಿನಲ್ಲಿ
ಬೆಳಕಬೀರಿ ತೋರುವೆ!
ಕಮಲದಂತೆ ವಿಮಲವಾಂತು
ನಗುತ ನಗುತ ನಲಿಯುವೆ!
ಸಮೆದುಬಂದ ಬೆಳ್ಳಿಯಂತೆ
ಬೆಳ್ಳಗಾಗಿ ಹೊಳೆಯುವೆ!
ಅದಕೆ ನಿನಗೆ 'ಬೆಳ್ಳಿಚಿಕ್ಕೆ'
ಎಂದು ಜನರು ಕರೆದರೊ?
ಮುದದಿ ಉಕ್ಕಿ 'ಶುಕ್ರ-ಚಿಕ್ಕೆ'
ಎಂದು ನಾಮುಗೈದರೊ?

.... .... ....

ಚೆಲುವದೆಲ್ಲ ಸೇರಿ ಇಲ್ಲಿ
ಚಿಕ್ಕೆ ರೂಪ ತಾಳಿದೆ!
ಒಲುಮೆಯೆಲ್ಲ ಘನಿಸಿ ಇಲ್ಲಿ
ಗಟ್ಟಿಗೊಂಡು ನಿಂತಿದೆ!

.... .... ....

ಕತ್ತಲೆನ್ನ ಮುತ್ತಿಬರಲು
ಸೋತು ನಾನು ಮಲಗುವೆ!
ಹೊತ್ತಿನೊಳಗೆ ಮೂಡಿ ನೀನು
ಎನ್ನ ಚಿತ್ತ ಬೆಳಗುವೆ!
ದಿನವು ಬಂದು ಏಳು ಎಂದು
ನಿದ್ದೆ ಸೆರೆಯ ಹರಿಯುವೆ!

ನನಗೆ ಶಾಂತಿ ನಿನ್ನ ಕಾಂತಿ !
ಇನ್ನದೆಂತು ಸುರಿಯುವೆ !
ನಿನ್ನ ತೇಜಪೋಜೆಯನ್ನು
ಮಾಜದಂತೆ ಇಡುವೆನು !
ನನ್ನ ಘನದ ಮನನದಲ್ಲಿ
ಹೊಚ್ಚಿ ಮುಚ್ಚಿ ನಡೆಸೆನು !!

# ಮಾಮರದ ನೆರಳು

೧

ಬೇಸಿಗೆಯಲ್ಲಿಯ ಬಿಸಿಲಿನ ಬೇಗೆಗೆ
ಬೆಂದಿಹ ಬಗೆಯನು ತಣಿಪುದಕೆ
ಆಶಿಸಿಬಂದೆನು ಮಾಮರ ನೆರಳಿನ
ನಮ್ಮಯ ತಂಪಿನ ತೋಟಕ್ಕೆ !

೨

ಹಾಸಿದ ನೆರಳಿನ-ಹಾಸಿಗೆ ಮೇಲೆಯೆ
ಬೇಸರಕಳೆಯಲು ಮಲಗಿದೆನು !
ಸೋಸಿದ ಗಾಳಿಯು ಬೀಸಲು ಬಿಡದೆಯೆ
ಸಗ್ಗದ ಲೋಕಕೆ ನುಗ್ಗಿದೆನು !

೩

ಅದ್ಭುತ ಕ್ಷೈಯನು ಅಮೃತ ರಸದಲಿ
ತಿಂದೆನು ಉಂಡೆನು ಸವಿತುತ್ತು !
ನಿದ್ರೆಯ ಸುಖವನು ಮುದ್ದಿಸಿ ಮುದ್ದಿಸಿ
ಮರಳಿದೆ ಹಿಂದಕೆ ಎಚ್ಚತ್ತು !

೪

ನಿದ್ರೆಯು ಸಾವಿನ ಮಗುವೆಂದರಿತೆನು
ಹಿಗ್ಗಿದೆನಿಂದಿದರನುಭವಕೆ !
ನಿದ್ರೆಯು ತಂದೆಯೆ ಸಾವೆಂದಾದರೆ
ಸಾವಿಗೆ ಅಂಜುವದಿನ್ನೇಕೆ !!

# ಬೇಸರ

೧

ಬೇಸರ ಬೇಸರ ಬೇಸರ ಬಂದಿದೆ
ಬಾಳಿನ ಸಾಗರ ಈಸೀಸಿ !
ಕೈಕಾಲಲುಗಿಸದಿದ್ದರೆ ಮುಳುಗುವೆ
ಬಂದುಳಿಸೆನ್ನನು ಕನಿಕರಿಸಿ !

೨

ಹಮ್ಮಿನ–ಯತ್ನದ-ಕಾಲ್ಗಳು ಕಳಿದಿವೆ
ಚೇತನೆ ಹಾರಿದೆ ಬಾನತ್ತ !
ಸೊಕ್ಕಿನ-ಸಾಹಸ-ಕೈಗಳು ಸೋತಿವೆ
ಮುಳು ಮುಳು ಮುಳುಗುವೆ ನೋಡುತ್ತ !

೩

ಕರುಣೆಯ ಕಣ್ಣಿನ ಕಿರಣವ ಕಳಿಸೈ
ನವೀನ ಚೇತನ ಪಡೆಯಲಿಕೆ
ನಂಬುಗೆಗುಂಬಳ ಸಂಗಡಿ ಸಂಗಡ
ಈಜುತ ದಡವನು ಸೇರಲಿಕೆ !

೪

ಬೇಸರ ಬೇಸರ ಬೇಸರ ಬಂದಿದೆ
ಬಾಳಿನ ಸಾಗರ ಈಸೀಸಿ !
ಕೈಕಾಲಲುಗಿಸದಿದ್ದರೆ ಮುಳುಗುವೆ
ಬಂದುಳಿಸೆನ್ನನು ಕನಿಕರಿಸಿ !!

# ನಿರಾಶೆ

೧

ಇರುವುದನಿತು ಚೆಂದವಲ್ಲ
ಬರುವುದೆನಿತು ಸುಂದರ !
ಬರುವುದೆಲ್ಲ ಬಂದಮೇಲೆ
ಬಾಳು ಹಾಳು ಮಂದಿರ !

೨

ಮುಂದೆ ಬರುವುದೆಂದು ಹಿಗ್ಗಿ
ಅಂದು ದಾರಿ ಕಾಯ್ದೆನು !
ಬಂದು ಹೋಗಲಿಂದು ನಾನು
ನೊಂದುಕೊಳುತಲಿರುವೆನು !

೩

ಆಶೆಯಿಂದ ಈಸು ದಿವಸ
ನಡೆದ ತುಂಬು ಜೀವನ
ಆಶೆ ತೀರೆ ಘಾಸಿಗೊಂಡು
ದಾಸನಾಯ್ತು ಸಾವಿನ !

೪

ಏಳು ಮನವೆ, ಹೇಳು ಏನು
ಕಾಳಕೂಟ ನುಂಗಲೆ ?
ಹಾಳು ಬಾಳ ತಾಳಲಾರೆ
ಬೇಗ ಮುಗಿಸಿ ಹೋಗಲೆ ?

೫

ಇರುವುದನಿತು ಚಂದವಲ್ಲ
ಬರುವುದೆನಿತು ಸುಂದರ !
ಬರುವುದೆಲ್ಲ ಬಂದಮೇಲೆ
ಬಾಳು ಹಾಳು ಮಂದಿರ !!

# ಬಾ ಇಲ್ಲಿಗೆ!

೧

“ ಜಗದಿರವು ಬರಿದಿಹುದು
ಜಗದಲ್ಲಿ ಏನಿಹುದು ? ”
ಹೀಗೆಂದು ಹೀಗಳೆದು
ಬಗೆ ಬೆಂದು ಬಾಡಿರಲು
ಬಾ ಎನ್ನ ನೇಹಿಗನೆ ನೀನಿಲ್ಲಿಗೆ !

೨

ನಮ್ಮೂರ ಬದಿಯಲ್ಲಿ
ಹಿರಿಹೊಳೆಯ ಧಡದಲ್ಲಿ
ಪೇರಲದ ಬನದಲ್ಲಿ
ಮಾಮರದ ನೆರಳಲ್ಲಿ
ತಂಪಾದ ತಾಣವಿದೆ ಬಾ ಇಲ್ಲಿಗೆ !

೩

‘ ಹೊಟ್ಟೆಯಲಿ ಹಿಟ್ಟಿಲ್ಲ ’—
ವೆಂದಳುವ ಜನರಿಲ್ಲ !
ಹೆಣ್ಣೆದೆಯ ಕಣ್ಣೀರ—
ಹೊಳೆ ಇಲ್ಲಿ ಹರಿದಿಲ್ಲ !
ಅದಕಾಗಿ ಅರೆಗಳಿಗೆ ಬಾ ಇಲ್ಲಿಗೆ !

೪

ಜಗಜನರ ಜಂಜಡವು
ಬಗೆಬಗೆಯ ಗೊಂದಲವು
ಒಂದಿಲ್ಲದಿಹುದಿಲ್ಲಿ
ಸುಂದರದ ಬನದಲ್ಲಿ !
ನೊಂದಿರುವ ನೇಹಿಗನೆ ಬಾ ಇಲ್ಲಿಗೆ !

## ಮಾಯಾ ಮಂದಿರ

೫

ಬಾಳನ್ನು ಸುತ್ತಿರುವ
ಗೋಳಿನಾ ಕತ್ತಲೆಯ
ಕಳೆದಾಚೆ ಹರಿದೊಗೆದು
ಬೆಳಕನ್ನು ಕಾಣಲಿದು
ಸರಿಯಾದ ತಾಣವಿದೆ ಬಾ ಇಲ್ಲಿಗೆ!

೬

ಚೆಲ್ಲಿರುವ ಕಾಂತಿಯಲಿ
ಇಲ್ಲಿರುವ ಶಾಂತಿಯಲಿ
ಎಲ್ಲವನು ಮರೆತಿಲ್ಲಿ
ಕಲ್ಲಾಗಿ ಕುಳಿತಿಲ್ಲಿ
ತಪಮಾಡೆ ದೂರಿಲ್ಲ ದೇವ ನಿನಗೆ!

೭

ಜಗದಾತ್ಮ ಪರಮಾತ್ಮ
ಸಿಗಲಾಗಿ ನಿನ್ನಾತ್ಮ
ಉಕ್ಕೇರಿ ಕುಣಿಯುವದು!
ನಕ್ಕಾಡಿ ನಲಿಯುವದು!
ನೇಹಿಗನೆ, ನೀನಿಲ್ಲಿ ಬಂದಗಳಿಗೆ!

೮

ಭ್ರಾಂತಿಯನು ದೂಡಲಿಕೆ
ಶಾಂತಿಯನು ಪಡೆಯಲಿಕೆ
ಆಧ್ಯಾತ್ಮದಡಿಯಿಡುತ
ಶುದ್ಧಾತ್ಮನಾಗಲಿಕೆ
ಜನಬಿಟ್ಟು ಬಾ ಇಲ್ಲಿ ಬಂದುಗಳಿಗೆ!!

# ಮಿತ್ತಿ

ಎತ್ತಲಿಲ್ಲ ಕೇಳುವಂತೆ
ಕತ್ತಿಯಂಥ ರಾಗ ತೆಗೆದು
ಒತ್ತಿ ಒದರಿ ಚೀರಲೇನು?

ಮುತ್ತಿನಂಥ ಮೂರೆ ಮಾತು
ಸುತ್ತಲಿರುವ ಹತ್ತು ಜನರ
ಚಿತ್ತ ಹಿಡಿಯೆ ಸಾಲದೇನು?

ಸಾರಿ ಹಾರಿ ಹೇಳಿದಂಥ
ಭಾರಿ ಬುರುಡೆಗೂಡಿದಂಥ
ನೂರು ಮಾತು ಯಾಕೆ ಬೇಕು?

ತೂರಿಬಂದ ಅರಿವಿನಿಂದ
ಸಾರಗೂಡಿ ಸೋಸಿಬಂದ
ಮೂರೆ ಮಾತು ಸಾಕೆ ಸಾಕು!

## ……ನಾನು ತಿಳಿಯೆನೆಂದಿಗು

ನನ್ನ ನಾನೆ ನನ್ನಿಯಿಂದು ಧನ್ಯನಾಗುವಂದಿಗು
ಏನು ಬೇಕು ಏನು ಬೇಡ ನಾನು ತಿಳಿಯೆನೆಂದಿಗು !

ಹಿಂದೆ 'ಬೇಕು' ಎಂಬುದೆಲ್ಲ ಇಂದು 'ಬೇಡ' ವಾಗಿದೆ !
ಇಂದು ಬೇಡವೆಂಬುದಿನ್ನು ಮುಂದೆ 'ಬೇಕು' ಎನಿಸದೆ ?

ಬೇಕುಬೇಡಕೇಕೆ ಆಶೆ ಜೋಕೆಯಿಂದ ನಡೆಯುವೆ !
ನಾಕನರಕವೇಕೆ ಬೇಕು ? – ಮೂಕನಾಗಿ ದುಡಿಯುವೆ !

ಬೇವುಬೆಲ್ಲದಾವ ನುಡಿಗು ಇಲ್ಲ ಕಿವಿಯು ಕೇಳಲು !
ದೆವ್ವ, ದೆವ್ವನವ್ವಬರಲಿ ಇಲ್ಲ ಕಣ್ಣು ಕಾಣಲು !

ಹಿಂಜಿ ನೋಡೆ ಬಂಜೆ ಬಾಳು – ಅಂಜಿಕೇಕೆ ನುಡಿಯಲು ?
ಗಂಜಿ ಇರಲಿ ನಂಜು ಬರಲಿ ಅಂಜಲಾರೆ ಕುಡಿಯಲು !

ಸಣ್ಣದಿರಲಿ ಮಣ್ಣದಿರಲಿ ನನ್ನದಾರಿ ನನ್ನದು !
ದಿಣ್ಣೆಗಿಣ್ಣೆ ಏನೆ ಇರಲಿ ನನ್ನದದುವೆ ನನ್ನದು !

ಕಲ್ಲುಮುಳ್ಳು ಎಲ್ಲ ಇರಲಿ ಒಲ್ಲೆನೆನ್ನೆ ಸಾಗಲು !
ಕಾಲಬರಲಿ ಅಲ್ಲಗಳೆಯೆ ಮಲ್ಲನಾಗಿ ಹೋಗಲು !

ತಪ್ಪೆ ಇರಲಿ ಒಪ್ಪೆ ಇರಲಿ ಗಪ್ಪುಗೊಂಡು ಸಾಗುವೆ !
ಅಪ್ಪ ಕುಗ್ಗ ಬಪ್ಪ ಹಿಗ್ಗ ನೆಪ್ಪನೆಲ್ಲ ನೀಗುವೆ !

ಹಾದಿಯಲ್ಲಿ ವಾದವೇಕೆ ? – ಹೋದ ಮೇಲೆ ಹಾಡುವೆ !
ಮೇಮು ಗಟ್ಟಿಯಾದ ಮೇಲೆ ಕಾದ ಹಿಡಿದು ನೋಡುವೆ !

ಇಂದು ನನ್ನಮುಂದೆ ಹೊನ್ನದೊಂದು ರಾಶಿ ಬೀಳಲಿ,
ಬಂದು ಹಿಗ್ಗ ಮುಂದೆ ಸುಗ್ಗದಂದು ಜೀವ ತಾಳಲಿ !

ಕಷ್ಟಬರಲು ಬಟ್ಟೆಗೆಟ್ಟು ಸಿಟ್ಟಿಗೇಳದಾಗಲಿ !
ಕಷ್ಟಕಿರದ ದುಷ್ಟದೇಹ ನಷ್ಟವಾಗಿ ಹೋಗಲಿ !

ನನ್ನಕಾವ ನನ್ನಿದೇವಗೆನ್ನ ಶಿರವು ಬಾಗಲಿ !
ನನ್ನಿಯಮೃತಾನ್ನ ಉಣಿಸಿ ನನ್ನನಾತ ತಣಿಸಲಿ !!

ನನ್ನ ನಾನೆನನ್ನಿಯುಂಡು ಧನ್ಯನಾಗುವಂದಿಗು,
ಏನು ‘ ಬೇಕು ’ ಏನು ಬೇಡ ನಾನು ತಿಳಿಯೆನೆಂದಿಗು !!

# ಈಜುತ್ತಿರುವೆ

೧

ನೋಡೊ ಎನ್ನ ಎಳೆಯಗೆಳೆಯ
ಆಳವಾದ ಬಾಳಹೊಳೆಯ
ಈಜುತಿರುವೆ ಈಜುತಿರುವೆ
ಸಾಜವಾಗಿ ಸರ್ವರಂತೆ !

೨.

ಚಣವು ನಿಮಿಷಗಳಿಗೆ ತಾಸ
ಹಗಲು ಇರುಳು ದಿವಸಮಾಸ
ವರುಷಗಿರುಷ ಉರುಳಿ ಉರುಳಿ
ಹೊನಲಿನೊಡನೆ ಸುರುಳಿ ಸುರುಳಿ-
ಯಾಗಿ ಭರದಿ ಹರಿಯುತಿರುವ
ಸೆಳವಿನೆಳೆತವದುವೆ ದೈವ !

೩

ಸೆಳೆವ ಸುಳುವಿನೊಳಗೆ ಸಿಕ್ಕು
ಸಾವ ಸನಿಹ ಸಾರದಂತೆ
ಕಾಲು ಕೈಯಕೂಡಿ ಚಲಿಸಿ
ನೀರನೂಕಿ ಬದಿಗೆ ಸರಿಸಿ
ಮೇಲೆ ಮೇಲೆ ತೇಲಿ ತೇಲಿ
ಈಜುತಿರುವುದದುವೆಯತ್ನ !

೪

ಸೆಳವು ಒಂದೆ ಸವನೆ ಬಂದು
ಗುರಿಯ ಮರೆಸುತಿರಲು ಅಂದು
“ ದೈವ ತಾನೆ ಒಯ್ಯುವಲ್ಲಿ

ಅರ್ಥವಿಲ್ಲ ಯತ್ನದಲ್ಲಿ "
ಎಂದು ನಾನು ಯತ್ನಬಿಟ್ಟೆ
ನೀರಿನಲ್ಲಿ ಮುಳುಗಗೊಟ್ಟೆ !

೫

ಗುರಿಯುಮಾತು ಹಿಂದೆ ಹೋಯ್ತು
ಉಳಿಯೆ ಜೀವ ದೊಡ್ಡದಾಯ್ತು
ಸಾವಿಗಂಜಿ ಮತ್ತೆ ಯತ್ನ-
ಮಾಡಲೆನ್ನ ಜೀವ-ರತ್ನ
ಉಳಿಯಿತಯ್ಯೊ ಉಳಿಯಿತೆಂದು
ಮರಣ ಕುತ್ತ ದಾಟ ಬಂದು !

೬

ಅಂದಿನಿಂದ ಹೊಳೆಯಿತೆನಗೆ :
" ಕುಂದು ದೈವ ನಂಬಿದವಗೆ.,
ದೈವ ಸೆಳವನೆದುರು-ಗಟ್ಟಿ
ಈಜಬೇಕು ಕಾಲಮೆಟ್ಟಿ !
ಯತ್ನವಿಲ್ಲದಿಲ್ಲ ಮಾರ್ಗ
ತಾನು ಸಾಯದಿಲ್ಲ ಸ್ವರ್ಗ !"

೭

ಕಾಳರಾತ್ರಿಯಲ್ಲಿ ಕೂಡ
ಬಾಳ ಹೊಳೆಯ ದಾಟಲಿಕ್ಕೆ
ಈಜುಯತ್ನ-ಎನ್ನ ಕೈಯ-
ಕೋಲಿನಂತೆ ಇರುವುದಯ್ಯೆ !
ಅದನೆ ತುಂಬ ನಂಬುತಿರುವೆ.,
ಈಜುತಿರುವೆ ಈಜುತಿರುವೆ !

೮

ಸೆಳವಿನೊಡನೆ ಕೊಚ್ಚಿಕೊಂಡ
ಬಾಳು ಹಾಳುಮಾಡಿಕೊಂಡ
ಹಿಂಡು ಹಿಂಡು ಜನರ ಕಂಡು
ನನ್ನ ನಾನೆ ಬೆರಗುಗೊಂಡು
ಆಚೆದಡವ ಸೇರಲೆಂದೆ
ಈಜುತಿರುವೆ ಮುಂದೆ ಮುಂದೆ !

೯

ಸೆಳವು ಎಷ್ಟೆ ಎಳೆಯುತಿರಲಿ
ಸುಳಿವುಗಳಿವು ಏನೆ ಇರಲಿ,
ಈಜಿ ಈಜಿ ಸೋಲದಂತೆ
ಸೆಳೆವ-ದೈವ-ಸೇರದಂತೆ
ಹಿರಿಯ ಆಶೆ, ಯತ್ನಗೈವ-
ಶಕ್ತಿ ಎನಗೆ ನೀಡೊ ದೇವ !!

# ಏಕಾಂತೆ!

ಏ! ಕಾಂತೆ, ಏಕಾಂತೆ, ನಿನ್ನ ದರ್ಶನಕಂತೆ
ಆತುರದಿ ಹಾತೊರೆದು ಬಂದೆನಿಂದು!
ಈ ಬಾಳಕಾಳಗದ ಕಣದಲ್ಲಿ ಹೋರಾಡಿ
ಆಸತ್ತು ಬೇಸತ್ತು ಬಂದೆನಿಂದು!
ನಿನ್ನ ಮೊಗ ನೋಡದೆಯೆ ಬಲುದಿನಗಳುರುಳಿದವು
ಅದಕಾಗಿ ಅವಸರದಿ ಬಂದೆನೀಗ!
ಹಾರಾಡಿ ಏರಾಡಿ ಮೈದಣಿದು ಮನದಣಿದು
ಹಣ್ಣಾಗಿ ಸಣ್ಣಾಗಿ ಬಂದೆನೀಗ!
ಕಳೆದು ಹೋಗದೆ, ನಿನ್ನ ಮುಖಕಮಲಕಂಡೊಡನೆ
ಎನ್ನ ಒಳಹೊರಗಿನಾ ದಣಿವು ತಾನು?
ನಿನ್ನೊಡಲ ಕಡಲ ಕಡೆಯಿಂದ ಹೊರಹೊರಟ ಸುಧೆ
ಬಂದು ಬಾಯಾರಿಕೆಯ ತಣಿಸದೇನು?
ಬಾ ಬಾರೆ ಬಾ ನೀರೆ ಬಾ ಇಳಿದು ಬಾ ಇಲ್ಲಿ
ಬಾಯಾರಿ ಬಳಲುವೆನು ಬಾ ಬೇಗನೆ!
ತಾ ತಾರೆ ತಾ ಇಲ್ಲಿ ತಾ ಒಂದು ಸುಧೆಬಿಂದು
ತಾ ತಿಂದು ಬದುಕುವೆನು ತಾ ಬೇಗನೆ!
ತೃಷೆಗೊಂಡ ತಕ್ಕೈಯೊಳು, ಬಾಯಿಲ್ಲಿ, ಬಿಗಿಪಿಡಿದು
ಬಿರಿಬಿರಿದು ಜಗವನ್ನೆ ಮರೆತು ಬಿಡುವೆ!
ನಿನ್ನಧರಸುದಿರೆಯನು, ತಾಯಿಲ್ಲಿ, ಕುಡಿಕುಡಿದು
ಮತ್ತೇರಿ ಮೈಮರೆತು ಮಲಗಿಕೊಳುವೆ!
ಏ! ಕಾಂತೆ, ಏಕಾಂತೆ ನಿನ್ನ ದರ್ಶನಕಂತೆ
ಆತುರದಿ ಹಾತೊರೆದು ಬಂದೆನಿಂದು!
ಈ ಬಾಳಕಾಳಗದ ಕಣದಲ್ಲಿ ಹೋರಾಡಿ
ಆಸತ್ತು ಬೇಸತ್ತು ಬಂದೆನಿಂದು!!

# ಈಚೆಗಾನು-ಆಚೆಗಾತ

೧

ಈಚೆಗಾನು-ಆಚೆಗಾತ
ನಡುವೆ ಹೊಳೆಯು ಹರಿದಿದೆ !
ಅಚ್ಚುಮೆಚ್ಚಿನಾತನೊಲ್ಮೆ
ನನ್ನನಾಚೆ ಕರೆದಿದೆ !

೨

ನೀರು ಬಹಳ ಆಳವಂತೆ
ಈಜು ನನಗೆ ಬಾರದು !
ಮೇಲೆ ಕುಳಿತು ದಾಟಕೊಳಲು
ದೋಣಿ ದಡದಿ ಕಾಣದು !

೩

ಹೊಳೆಯ ಆಚೆ ಹೋಗಲೆಂತು?--
ಚಿಂತೆಮಾಡುತಿರುವೆನು !
ಇಲ್ಲೆನಿಲ್ಲಲಾಗದಾಗಿ
ಒಳಗೆ ಮರುಗುತಿರುವೆನು !

೪

ಕೆಲಸಬಿಟ್ಟು ತಾನೆ ಬಂದು
ಒಯ್ಯಲಾರ, ಬಲ್ಲೆನು !
ದೋಣಿ ಕಳುಹಬಾರದೇನು
ಇನ್ನು ತಾಳಲಾರೆನು !

೫

ಈಚೆಗಾನು ಆಚೆಗಾತ
ನಡುವೆ ಹೊಳೆಯುಹರಿದಿದೆ !
ಅಚ್ಚುಮೆಚ್ಚಿನಾತನೊಲ್ಮೆ
ನನ್ನನಾಚೆ ಕರೆದಿದೆ !!

# "..........ನಾ ಬರುವೆ ನಿನ್ನೆಡೆಗೆ"

ದಿನವೆಲ್ಲ ದುಡಿದುಡಿದು
ತನುತಾಪಗೊಂಡಿರಲು
ಬಗೆಬೆಂದು ಬಾಡಿರಲು
ನಗೆಮೊಗವ ನೋಡಲಿಕೆ
........ನಾ ಬರುವೆ ನಿನ್ನೆಡೆಗೆ !

ಹೊಟ್ಟೆಬಲುಹಸಿದಿರಲು
ಹಿಟ್ಟದಕೆ ಸಿಗದಿರಲು
ನಿನ್ನ ಹೆಸರನು ನೆನಿಸಿ
ಅನ್ನಕೊಡು ಅನ್ನೆಂದು
........ನಾ ಬರುವೆ ನಿನ್ನೆಡೆಗೆ !

ಬೇಸೆಬರೆ ಮಲಗಿರಲು
ನಾನು ಬಲು ಸೊರಗಿರಲು
ನೋಯುತಲಿ ನರಳುತಲಿ
'ಕಾಯೊ !' ಎಂದೊರಲುತಲಿ
........ನಾ ಬರುವೆ ನಿನ್ನೆಡೆಗೆ !

ಕಾರಿರುಳು ಕವಿದಾಗ
ದಾರಿ ಸುಳು ಸಿಗದಾಗ
ಬಾಳ ಹೊರೆ ಹೊತ್ತಾಗ
ಮುಳ್ಳು ತುಳಿದತ್ತಾಗ
........ನಾ ಬರುವೆ ನಿನ್ನೆಡೆಗೆ !

ಮಾಯಾ ಮಂದಿರ

ದುಃಖ ಸುಖದಾದಿ ಇರೆ
ದುಃಖವನೆ ಹಳಿಯುವರೆ ?
ಇರುಳು ಬೆಳಗಿನ ಆದಿ,
ಅರಲು ನಿನ್ನಯ ಹಾದಿ !
.... ...ನಾ ಬರುವೆ ನಿನ್ನೆಡೆಗೆ !

ಏರಾಚೆ ಇಳುವೆಂತೊ
ನೀರಾಚೆ ನೆಲವೆಂತೊ
ನೋವಾಚೆ ನಲಿವಂತೆ,
ದೂರಾಚೆ ನೀನಂತೆ !
........ನಾ ಬರುವೆ ನಿನ್ನೆಡೆಗೆ !!

# ಬೆಳವಿನ ಕೂಗು

ಗುಕೂಗೂ ಗುಳಬುಟ್ಟಿ
ಈ ಬಾಳ ಕಿರಿಬುಟ್ಟಿ
ಮಾಯಕ್ಕೆ ತೆರೆದಿಟ್ಟಿ !

ಸುಖದುಃಖ ತಂದೊಟ್ಟಿ
ಇವರಲ್ಲಿ ತುಂಬಿಟ್ಟಿ !
ಗುಕೂಗೂ ಗುಳಬುಟ್ಟಿ !

ಕಾಲೆಂಬ ಹಳದಲ್ಲಿ
ಮುಳಗಂಟಿ ಮಡಿಲಲ್ಲಿ
ಈ ಬುಟ್ಟಿ ತಂದಿಟ್ಟಿ !

ಮುಳಿಬಂತು ನೀರಾಯ್ತು
ಹೊಳಿಬಂತು ಹರಿದೊಯ್ತು !
ಗುಕೂಗೂ ಗುಳಬುಟ್ಟಿ !

ಓಂಕಾರ ಜಪಗೂಡಿ
ತೊಳಿದಿಟ್ಟು ಬರಿಮಾಡಿ
ಇಡಬೇಕು ಈ ಬುಟ್ಟಿ !

ತೇಲೂತ ಹೋದೀತು
ದೊರಿಪಾವ ಮುಟ್ಟೀತು !
ಗುಕೂಗೂ ಗುಳಬುಟ್ಟಿ !!

# ಜೀವ-ಸಾವ

೧

ಕಾಲ-ಹಕ್ಕಿ ಹೊಟ್ಟೆಯಿಂದ
    ಜೀವ-ಮೊಟ್ಟೆ ಹುಟ್ಟಿತು !
ಸಾವ-ಮರಿಯು ತನ್ನ ಒಳಗೆ
    ಇಟ್ಟುಕೊಂಡೆ ಹುಟ್ಟಿತು !

೨

ಮರಿಯು ಬೆಳೆದು ಬಾಳಲೆಂದೆ
    ಹಕ್ಕಿ ಕಾವುಕೊಡುತಿತು !
ತಾಯಿ ತನ್ನ ಬೆಳೆಸುತಿರುವ-
    ಳೆಂದೆ ಮೊಟ್ಟೆ ತಿಳಿಯಿತು !

೩

'ಬೆಳೆಯುತಿರುವೆ' ನೆಂದು ಮೊಟ್ಟೆ
    ಹೇಳುತಿರುವುದೇನದು ?
'ಸಾಯುತಿರುವೆ'—ನೆಂದು ಅಂದ
    ಹಾಗೆ ಅಲ್ಲವೇನದು ?

೪

ಮೊಟ್ಟೆ ಹೊಟ್ಟೆ ಬಿರಿದು ಹರಿದು
    ಮರಿಯು ಹೊರಗೆ ಬಂದಿತು !
ಸೊಟ್ಟೆಯಾಗಿ ಗಾಳಿಗೂಡಿ
    ಮೊಟ್ಟೆ ಹಾರಿಹೋಯಿತು !

೫

ತನ್ನ ತಿಂದು ಕೊಂದು ಬಿಡುವ
    ಮರಿಯು ಮೊಟ್ಟೆ ಹಳಿವುದೆ ?
ಮರಿಯನೊಳಗೆ ಇರಿಸಿಕೊಳದೆ
    ಮೊಟ್ಟೆಗಿರವು ಬರುವುದೆ ??

# ಅಳು–ನಗು

ಅಳುವವರು ಅಳುತಿರಲಿ !
ನಗುವವರು ನಗುತಿರಲಿ !
ಅಳುವವರ ಅಳುಕಂಡು
ನಗೆ ಬಾರದಿರಲಿ !
ನಗುವವರ ನಗೆ ನೋಡಿ
ಅಳು ಬಾರದಿರಲಿ !
ಅಳುವವರ ಅಳು ನಗೆಗೆ
ನೆವವಾಗದಿರಲಿ !
ನಗುವವರ ನಗೆ ತಾನು
ಪರಿಶುದ್ಧವಿರಲಿ !!

ಅಳುವವರು ಅಳುತಿರಲಿ !
ನಗುವವರು ನಗುತಿರಲಿ !
ಅಳುವವರ ದುಃಖಕ್ಕೆ
ನಗುವವರ ನಗೆನೀಗಿ
ಕಣ್ ತುಂಬಿ ಬರಲಿ !
ನಗುವವರ ನಗೆತಕ್ಕೆ
ಅಳುವವರ ಮೊಗದುಂಬಿ
ನಗೆಮೂಡಿ ಬರಲಿ !!

ಅಳುವವರು ಅಳುತಿರಲಿ !
ನಗುವವರು ನಗುತಿರಲಿ !
ಅಳುವವರ ಅಳಲುಂಡು
ನಗುವವರ ನಗೆನುಂಗಿ
ಜಗತ್ತಣ್ಣಗಿರಲಿ !
ಅಳುನಗುಗಳಾಳರಿತು
ಅಳುಅಳುತ ನಗುನಗುತ
ಕವಿ ಹಾಡುತಿರಲಿ !!

# ಬಾ ನಲ್ಲನೆ ಬಾ ಬೇಗ !

೧

ಇಂದೆನ್ನಯ ಮನ-
ಮಂದಿರದೊಳಗಿನ
ಹಳೆಕೊಳೆ ತೊಳೆದಿದೆ,
ತಿಳಿಕಳೆ ಬೆಳಗಿದೆ !
ಬಾ ಒಡೆಯನೆ ಬಾ ಬೇಗ !

೨

ಬಗೆಮಿಗೆ ಸೊಗಸಿದೆ !
ನಗೆಮುಗುಳರಳಿದೆ !
ಯಾತನೆಯಡುಗಿದೆ !
ಚೇತನೆ ಚಿಮ್ಮಿದೆ !
ಬಾ ದೇವನೆ ಬಾ ಈಗ !

೩

ಸರಿ, ನೀ ಬರುವುದೆ
ಬರಿ ಕಾದಿರುವುದೆ ?
ಸೊಗವಳಿವುದರಲೆ
ಲಗುಬಗೆಯಿಂದಲೆ
ಬಾ ನಲ್ಲನೆ ಬಾ ಬೇಗ !

೪

ಎದೆಕದ ತೆರೆದಿದೆ !
ಮುದ ಮಿದು ಹಾಸಿದೆ !
ಉಸಿರಿದೊ ಎನುತಿದೆ :
" ಸುಸ್ವಾಗತವಿದೆ ! "—
ಬಾ ಮರೆಯದೆ ಬಾ ಈಗ !!

# ತೊಟ್ಟಿಲ ತೂಗೈ ತೊಟ್ಟೀಲ !

೧

ತಂದೆಯು ತಾಯಿಯು ನೀನಾಗಿ
ಬಂಧುವು ಬಳಗವು ನೀನಾಗಿ
ಸಕ್ಕರೆ-ಹಾಡನು ನೀ ಹಾಡಿ
ಅಕ್ಕರೆಯಿಂದಲಿ ಕೈ ಮಾಡಿ
ತೊಟ್ಟಿಲ ತೂಗೈ ತೊಟ್ಟೀಲ !

೨

ಎಲುವಿನ-ಕಟ್ಟಿಗೆ ತೊಟ್ಟೀಲ !
ಮಾಂಸದ ಮುದ್ದೆಯು ತೊಟ್ಟೀಲ !
ದೇಹದ ಮಾಯದ ತೊಟ್ಟೀಲ !
ಹುಟ್ಟುವ ಸಾಯುವ ತೊಟ್ಟೀಲ !
ತೊಟ್ಟಿಲ ತೂಗೈ ತೊಟ್ಟೀಲ !

೩

ಜೀವವೆ ದೇಹದ ರೂಪಾಗಿ
ಆತ್ಮವೆ ದೇಹಕೆ ಜೀವಾಗಿ-
ಇರುವಾ ಕೂಸದು ಮಲಗಿಹುದು
ತೊಟ್ಟಿಲ ಒಳಗಡೆ ಒರಗಿಹುದು !
ತೊಟ್ಟಿಲ ತೂಗೈ ತೊಟ್ಟೀಲ !

೪

ಬಗೆಬಗೆ ನೋವಿಗೆ ಅತ್ತತ್ತು
ಬಾಳಿನ ಬೇಗೆಗೆ ಬೇಸತ್ತು
ಯೋಗದ ಶಾಂತಿಗೆ ಮರೆಹೊಕ್ಕು
ಬಿದ್ದಿದೆ ನಿದ್ದೆಗೆ ಸೆರೆಸಿಕ್ಕು !
ತೊಟ್ಟಿಲ ತೂಗೈ ತೊಟ್ಟೀಲ !!

# " ಇರು "

" ಹಿಂದೆಲ್ಲಿದ್ದೆನು ?
ಮುಂದೆಲ್ಲಿರುವೆನು ?
ಇಂದಿಲ್ಲಿರುವುದು ಏತಕ್ಕೆ ?"
ಎಂದೆನುವಂತಹ
ಎಂದಿಗು ಮುಗಿಯದೆ
ನಿಂದಿಹ ಚಿಂತೆಯು ನಿನಗೇಕೆ ? || ೧ ||

ಇರುವುದ ಕಲಿಯೈ
ಇರುವುದ ಕಲಿಯೈ
ಅರಿತಿರುವುದನೇ ಕಲಿಬೇಗ !
ಇರುವುದನರಿಯದೆ
ಪರವನ್ನರಿವುದೆ ?
ಇರು ಇರು ಸುಮ್ಮನೆ ನೀನೀಗ ! || ೨ ||

' ಇರುವವು ' ಮಕ್ಕಳು
' ಇರುವವು ' ಹಕ್ಕಿಗ-
' ಳಿರುವವು ' ದನಕರು ಸುಖದಿಂದ !
' ಇರುವವು ' ಗಿಡಮರ
' ಇರುವವು ' ಜಡಜೀ-
' ವಿರುವವು ' ದೇವರ ದಯದಿಂದ ! || ೩ ||

ಮುಂದೇನಾಗುವು-
ದೆಂದೇನರಿಯವು !
ಹಿಂದಿನಗೊಡವೆಗೆ ಹೋಗಿಲ್ಲ !
ಹಿಂದಿನ ಮುಂದಿನ-
ದೊಂದನು ಅರಿಯದೆ
ಇಂದಿನ ಪುಟ್ಟಿಗೆ ಇಹವಲ್ಲ ! || ೪ ||

ಇರುವುದರಲ್ಲಿಯೆ
ಇರುವುದು ಏನೋ
ಇರುತಿರುತರಿಯ್ಯೆ ಆ ಶಕ್ತಿ !
ಬರೆಯುಲು ಬಾರದೆ
ಮರೆಯುಲು ಆಗದೆ
ಅರೆನಯರೆ ಹೇಳುವೆನೀ ಉಕ್ತಿ !! ॥ ೫ ॥

# "ಜೀವಿಸಿ ಇರುವುದೆ ಜೀವನದರ್ಥವು!"

ಜೀವಿಸಿ ಇರುವುದೆ ಜೀವನದರ್ಥವು!
ತಿಳಿಯದೆ ತೊಳಲುವ ಬಾಳೇ ವ್ಯರ್ಥವು!

೧

ಅನುದಿನ ಚಿಂತಿಸಿ ತೊಳಲಿದೆ ಬಳಲಿದೆ
ಜೀವನವೆಂದರೆ ಏನೆಂದು!
ತಿಳಿಯದೆ ಹೋಳಿಯದೆ ಕೊನೆಯನೆ ಕಾಣದೆ
ದಾರಿಯು ತಿರುಗಿದೆ ನೂರೊಂದು!

೨

ಭೂಮಿಗೆ ಹತ್ತಿದ ಮುಗಿಲನು ಮುಟ್ಟಲು
ನಡೆದೂ ನಡೆದೂ ಸಾಕಾಯ್ತು!
ತನ್ನಯ ಮರೆಯಲಿ ಅಡಗಿದ ಕಂಪನು
ಹೊರಗಡೆ ಹುಡುಕಿದ ಹಾಗಾಯ್ತು!

೩

ಮುಚ್ಚಳ ಮುಚ್ಚಿದ ಗಡಿಗೆಯ ಒಳಗಡೆ
ಜಟ್ಟಿಯ ತೆರದೊಳು ಜಗಿದಾಡಿ
ಪೆಟ್ಟಿಕ್ಕೆ ಸೋಲುತ ಬೀಳಲು ಒಂಪೆಡೆ
ಅರಿತೆನು ಜೀವನವೊಳನಾಡಿ :

೪

" ಕೀಳನು ಮೇಲನು ಎಣಿಸದೆ ಸುಮ್ಮನೆ
ಜೀವಿಸಿ ಇರುವುದೆ ಮೇಲೆಂದು
ಅವನಿಗೆ ಎಲ್ಲವನರ್ಪಿಸಿ ಬಿಡುವೆನೆ
ಬಾರದು ನನಗಾಗೋಳೊಂದು. "

" ಜೀವಿಸಿ ಇರುವುದೆ ಜೀವನದರ್ಥವು ;
ತಿಳಿಯದೆ ತೊಳಲುವ ಬಾಳೇ ವ್ಯರ್ಥವು! "

# ನನ್ನ ಪ್ರಾಣನಾಥ!

೧

ಆಲಪರಿದು ಚಾಲವರಿದು
　　ಅತ್ತುಕರೆದು ಕೇಳಿದೆ!
ಕಾಲುಬಿದ್ದು ಕೈಯುಮುಗಿದೆ
　　ಮನೆಗೆ ಬರಲು ಹೇಳಿದೆ!

೨

ಕಾಲುಕೈಯ ಚಲಿಸಲಿಲ್ಲ
　　ಕಣ್ಣು ತೆರೆದು ನೋಡದೆ,
ಕಲ್ಲುಗೊಂಬೆ ಏನೊ ಎಂಬೆ
　　ಸುಮ್ಮನಿಂತನಲುಗದೆ!

೩

ತೆಕ್ಕೆಬಿದ್ದು ಮೈಯನಲುಗಿ
　　ಮೌನಗೆಡಿಸಲಾತನು
ಸೊಕ್ಕಿನವಳೆ, ನಿನ್ನ ಮನೆಗೆ
　　ಬಾರೆನೆಂದ ನಾಥನು!

೪

ಹಗ್ಗವೆಂದು ಮೈಯುಮುರಿದು
　　ಹಾವ ಹೆಡೆಯ ಮೆಟ್ಟಿದೆ!
ಕುಗ್ಗಿ ಕುಸಿದು ಬಿದ್ದುಬಿಟ್ಟೆ
　　ಪಾದ ತುದಿಯ ತಟ್ಟಿದೆ!

೫

ಅಡಿಯ ಬುಡದಿ ಮುಡಿಯು ಹೋದೆ
　　ಕಣ್ಣು ತೆರೆದನಾತನು!
‘ನಡೆಯೆ, ಮನೆಗೆ ಬರುವೆನೆಂ’ದ
　　ನನ್ನ ಪ್ರಾಣನಾಥನು!!

# ನಕ್ಕು ನಗಿಸು

ನಗುವ ನಿನ್ನ
  ಮೊಗದ ಮೇಲೆ
    ಮುಗುಳು ಅರಳಿ ನಿಂತಿದೆ!

ಜಗದ ಎಲ್ಲ
  ಸೊಗವು ಸೇರಿ
    ಬಿಗಿದು ಬಿಚ್ಚಿದಂತಿಡೆ!

ನಕ್ಕು ಸಾಯೆ
  ನಾಕವಂತೆ
    ಯಾಕೆ ಸುಮ್ಮನಿರುವುದು!

ನಕ್ಕು ನಗಿಸು
  ದುಃಖ ಮರೆಸು
    ಮಿಕ್ಕದೇನನೊರೆವುದು?

# ದೇವರ ಪ್ರೀತಿ ಯಾರ ಮೇಲೆ?

೧

ದೇವರೆ! ದೇವರೆ! —ಎನ್ನುತ ಮಣಮಣ
ಮಂತ್ರವ ಪಠಿಸುವ ಜೋಗಿಗಳೆ!
ಅಯ್ಯೋ ದೇವರೆ, ಕಾಯೋ ದೇವರೆ
ಎಂದಳುವಂತಹ ರೋಗಿಗಳೆ!
ದೇವರೆ ದೇವರೆ–ಎನ್ನುತ ಅರಚುವ
ಅಳುಮೊಗ ಮಾಡಿದ ಹೇಡಿಗಳೆ!
ಹಗಲಿರುಳೆನ್ನದೆ ಉಸಿರನು ಬಿಡದೆಯೆ
ಕಿರಚುವಿರೇತಕೆ ಖೋಡಿಗಳೆ!

೨

ದೇವರ ಪ್ರೀತಿಯು ಪಡೆಯುವಗೋಸುಗ
ದೇವಗೆ ತೊಂದರೆ ಕೊಡಬೇಕೆ?
ಕಿರಚುವ ಮಕ್ಕಳ ಗೋಳನು ಕಂಡಾ
ದೇವನು ಸಂತಸಪಡಬೇಕೆ?
ದೇವರ ಪ್ರೀತಿಯ ಪಡೆಯುವ ಮಾರ್ಗವು
ಖಂಡಿತವಾಗಿಯು ಹೀಗಲ್ಲ!
ದೇವರ ಹೆಸರನು ಹೇಳುತ ಕೂಗುವ
ಗಾನವೆ ದೇವಗೆ ಬೇಕಿಲ್ಲ!

೩

ಆಡುವ ಮಗುವನು ಕಂಡರೆ ತಾಯಿಗೆ
ಅಕ್ಕರೆ ಉಕ್ಕದೆ ಇದ್ದೀತೆ?
ಕಿರಚುವ ಕೂಸಿನ ಕೀಸರವಾಕೆಗೆ
ಬೇಸರ ಬರಿಸದೆ ಹೋದೀತೆ?

ಕುಣಿಕುಣಿದಾಡುವ ಮಕ್ಕಳ ಮೊಗದಲಿ
ನಗೆನವಿಲಾಡದೆ ಇದ್ದೀತೆ?
ನೋಡಿದ ತಾಯಿಯ ಎದೆಯಲಿ ಹಿಗ್ಗಿನ
ಹೊಳೆಹರಿದಾಡದೆ ಹೋದೀತೆ?

೪

ಮಕ್ಕಳ ಆಟಕೆ ವಿಶ್ವದ ಸುಂದರ
ಮಾಯಾ ಮಂದಿರ ಮಾಡಿಹನು!
ರವಿಶಶಿ ನೆಲಜಲ ತರುಲತೆ ಚಳಿಮಳೆ-
ಗಾಳಿಯ ನೆರವಿಗೆ ನೀಡಿಹನು!
ಅಳುವುದ ನಿಲ್ಲಿಸಿ ಆಡಲು ಬಂದರೆ
ದೇವರು ನಿಮ್ಮನು ಒಲಿದಾನು!
ಕೂಗುತ ಕರೆಯುತ ಅಳುವುದೆಯಾದರೆ
ಆತನು ಸಿಟ್ಟಿಗೆ ಬಂದಾನು!

೫

ಆಡದ ಮಕ್ಕಳ ಮಲಗಿಸಿ ಸಾವಿನ
ಸೆರಗನು ಹೊಚ್ಚುವನವನಿತ್ಯ!
ಆಡುವ ಮಕ್ಕಳ ಆಟವ ನೋಡುತ
ನಲಿನಲಿದಾಡುವನಿದು ಸತ್ಯ!
ದೇವರ ಮಕ್ಕಳೆ ಕೂಡಿರಿ ಆಡಿರಿ
ಆಟವೆ ನಿಮ್ಮಯ ಹಿರಿಗೆಲಸ!
ಅಳುವಾ ಮಕ್ಕಳೆ ಆಡಲು ಬನ್ನಿರಿ
ಅದುವೇ ದೇವಗೆ ಬಲು ಹರುಷ!!

# ಸಾವಿಗೇಕೆ ಅಂಜಬೇಕು?

೧

ಎಳೆಯ ಗೆಳೆಯ, ಹೇಳು ಹೇಳು
ಅಂಜುತಿರುವೆ ಏತಕೆ?
ಬಾಯಿ ತೆರೆದು ನುಂಗಲಿರುವ
ಮರಣವೆಂಬ ಭೂತಕೆ?
ಮಾಯತೆರೆಯ ಹರಿದು ಬಂದು
ನಿನ್ನ ನೀನೆ ನೋಡಿಕೊ!
'ಸಾವಿಗೇಕೆ ಅಂಜಬೇಕು'—
ನಿನಗೆ ನೀನೆ ಕೇಳಿಕೊ!!

೨

ಹುಟ್ಟಿದೊಡನೆ ಹುಟ್ಟಿತಂತು
ಸಾವು ಬೆನ್ನ ಬಿಡದಲಿ!
ಬಾಳಿದಂತೆ ಬೆಳೆದು ಬಂತು
ನಿನ್ನ ದೇಹ ಮರೆಯಲಿ!
ಜೀವ ಜೀವಿಸಿರುವುದನ್ನು
ತಿಳಿದರೇನು ತಿಳಿಯದೆ
ಜೀವ ಸಾಯುತಿರುವುದನ್ನೆ
ತಿಳಿದ ಹಾಗೆಯಾಗದೆ?
ಜೀವತಿಂದು ಜೀವಿಸಿರುವ
ಸಾವನೆಂತು ಹಳಿವುದು?
ಸಾವನೊಳಗೆ ಇರಿಸಿಕೊಳದ
ಜೀವವೆಂತು ಇರುವುದು?
ಮಾಯ ತೆರೆಯ ಹರಿದು ಬಂದು
ನಿನ್ನ ನೀನೆ ನೋಡಿಕೊ!

ಸಾವಿಗೇಕೆ ಅಂಜಬೇಕು ?
ನಿನಗೆ ನೀನೆ ಕೇಳಿಕೊ !!

೩

ನಿನ್ನ ದೇಹವನ್ನು ಸಾವು
ನುಂಗಬಲ್ಲುದಲ್ಲದೆ
ಅದನೆ ನುಂಗಿ ನೀರು ಕುಡಿವ
ನಿನ್ನ ನುಂಗ ಬಲ್ಲದೆ ?
ತಿಳಿವಿನಾಚೆ ತಿಳಿವುಕೂಡ
ನೀನೆ ಎಂಬುದರಿಯದೆ ?
ನೀನು ನಿನ್ನ ದೇಹವಲ್ಲ !—
ನಿನಗೆ ತಿಳಿಯಲಾರದೆ ?
ಹುಟ್ಟುಸಾವು ಮೆಟ್ಟಿದಾಗ
ನೀನೆ ದೇವನಲ್ಲದೆ
ಆದಿ–ಅಂತವಿಲ್ಲದಂತ
ನಿತ್ಯವಸ್ತುವೆಲ್ಲಿದೆ ?
ಮಾಯ ತೆರೆಯು ಹರಿದು ಬಂದು
ನಿನ್ನ ನೀನೆ ನೋಡಿಕೊ !
ಸಾವಿಗೇಕೆ ಅಂಜಬೇಕು ?–
ನಿನಗೆ ನೀನೆ ಕೇಳಿಕೊ !!

# ...............ಮಿಡುಕದಿರು!

ಮಿಡುಕದಿರು ಮಿಡುಕದಿರು ಎಲೆ ಜೀವ, ಮಿಡುಕದಿರು
ಬರುವದಿದೆ ಪೇಳ್ವೆ ತುಸು ತಾಳು ತಾಳು!
ಮಿಡುಕು ಕೆಡಕನು ತರಲು ಮಿಡುಕದಿರು ಮಿಡುಕದಿರು
ಮರಿಮರಿತು ಮೌನವನೆ ತಾಳಿ ಬಾಳು!

ಹೊಸಬಿಸಿಯು ಮಿಡುಕಿನಲಿ ಮಸಕುಕಸಕುಗಳುಂಟು
ಅವಸರದೊಳರೆಮುರೆಗಳುಂಟುವುಂಟು!
ಎಳಕುಕೊಳಕುಗಳುಂಟು ಹರಕುಮುರಕುಗಳುಂಟು
ಮಿಡುಕಿನಲಿ ಬಿಸಿಬಿಸಿಗಳುಂಟುವುಂಟು!

ಗಿಡಮುದಿಯ ಕಗ್ಗಾಯ್ಗಳ ಕೆಳಕೆಡಹಿ ಬಿರುಗಾಳಿ
ಭರಭರನೆ ಭರದಿಂದ ಬೀಸಬೇಕು!
ದಿನದುಂಬಿ ಹಣ್ಣಾದ ಇನಿವಣ್ಣು ತಂತಾನೆ
ಬೀಳುತಿದೆ, ಅದಕಾವ ಗಾಳಿಬೇಕು?

ಬರತಕ್ಕುದೇನುಂಟೊ ಅದು ಬಂದೆಬರುವದ್ದೈ
ಬರುವವರೆಗೂ ಸಹನೆಯು ಬೇಡವೇನು?
ತರತಕ್ಕುದೇನುಂಟೊ ಅದು ತಂದೆತರುವದ್ದೈ
ತಡವಾದರೇನಂತೆ ತಾಳು ನೀನು!

ಮಿಡುಕಿದರು ದಡವಿಲ್ಲ ಹುಡುಕಿದರು ಹುರುಳಿಲ್ಲ
ದೊರೆಯಲಾರದುದು ತಾ ದೊರೆಯದೆಂದೂ!
ಸಿಡುಕಿದರು ಬೆಲೆ ಇಲ್ಲ ಮಿಡುಕಿದರು ಫಲವಿಲ್ಲ
ಬರಲಾರದುದು ಬಾರದೆಂದುಯೆಂದೂ!

ಏತಕ್ಕೆ ಮಿಡುಕುತಿಹೆ ಏನನ್ನು ಹುಡುಕುತಿಹೆ?
ದುಡುಕು ಹುಡುಕಿನ ಬೇರನರಿತುಕೊಳ್ಳು!
ಆ ಬೇರು ಬೇಡುತಿದೆ ನೀರ ನೀರೆನ್ನುತಿದೆ
ಒಳಗಿರುವ ತಿಳಿನೀರ ಕಂಡುಕೊಳ್ಳು!!

# "ಬಲವು ಬರಲಿ ಪ್ಬೈಯಲಿ"

೧

ಹೆಣ್ಣು ಬೇಡೆ ಹೊನ್ನು ಬೇಡೆ
ಮಣ್ಣು ಬೇಡಲಾರೆನು !
ಸುಖವು ಬೇಡೆ ಸ್ವರ್ಗ ಬೇಡೆ
ಮೋಕ್ಷ ಬೇಡಲಾರೆನು !
ಮಾನಬೇಡಿ ಕೀರ್ತಿಬೇಡಿ
ಅಮರನಾಗಲಾರೆನು !
ಎಲ್ಲರಂತೆ ಒಳಿತನೊಂದೆ
ಬೇಡಿ ಬೇಡಿ ಕಾಡೆನು !
ಆದರಾನು ಬೇಡಿಕೊಳುವು-
ದೊಂದೆ ನಿನ್ನ ಬಳಿಯಲಿ,
ಬಂದ ಎಡರನೆದುರುಗೊಳುವ
ಬಲವು ಬರಲಿ ಪ್ಬೈಯಲಿ !!

೨

ದೀನ ಹೀನ ಬಡವರೆನ್ನ
ಅಣ್ಣತಮ್ಮರಲ್ಲವೆ ?
ಕೀಳ ಪಾಪಿ ಪತಿತರೆನ್ನ
ಬಂಧುಬಳಗವಲ್ಲವೆ ?
ಅವರನುಳಿದು ಸ್ವರ್ಗವೆಲ್ಲಿ ?
ಬೇಡಬೇಡ ಬೇಡದು !
ಅವರನುಳಿದು ಮೋಕ್ಷವೆಲ್ಲಿ ?
ಬೇಡಬೇಡ ಬೇಡದು !

ಆದರಾನು ಬೇಡಿಕೊಳುವು-
ದೊಂದೆ ನಿನ್ನ ಬಳಿಯಲಿ,
ಬಂದ ಎಡರನೆದುರುಗೊಳುವ
ಬಲವು ಬರಲಿ ಮೈಯಲಿ !!

೩

‘ ಕಷ್ಟನಷ್ಟ ಬೇಡವೆನಗೆ
ಸಾವನೋವನೊಲ್ಲೆನು ! ’
ಎನ್ನಬಹುದೆ ಮರುಳರಂತೆ
ಇಲ್ಲ ನಾನು ಬಲ್ಲೆನು !
ಕಷ್ಟನಷ್ಟ ರೋಗರುಜಿನ
ನೋವುಸಾವು ಎಲ್ಲವು
ಹುಟ್ಟಿಬಂದ ಮೇಲೆ ನಮಗೆ
ಬಾರದಿರುವುದಿಲ್ಲವು !
ಆದರಾನು ಬೇಡಿಕೊಳುವು-
ದೊಂದೆ ನಿನ್ನ ಬಳಿಯಲಿ,
ಬಂದ ಎಡರನೆದುರುಗೊಳುವ
ಬಲವು ಬರಲಿ ಮೈಯಲಿ !!

೪

ಹುಟ್ಟುಗುಣಗಳನ್ನು ನಾವು
ಹಳಿವುದೆಂತು ತಿಳಿಯದೆ ?
ಹಳಿದರೇನು ಹೋಗಬಹುದೆ
ಹೂಳುವನಕ ಉಳಿಯದೆ ?
ನಾಯಿ ಬಾಲ ಡೊಂಕು ಇರಲು
ಕಂಬಿಕಟ್ಟೆ ಕಳೆವುದೆ ?

ಹರಿವ ಗುಣವು ನೀರಿಗಿರಲು
ಒಡ್ಡು ಹಾಕಿ ತಡೆವುದೆ ?
ಆದರಾನು ಬೇಡಿಕೊಳುವು-
ದೊಂದೆ ನಿನ್ನ ಬಳಿಯಲಿ !
ಬಂದ ಎಡರನೆದುರುಗೊಳುವ
ಬಲವು ಬರಲಿ ವೈಯಲಿ !!

೫

ದೇಹ ಗುಣಗಳೇನು ಉಂಟೊ
ಆಗಿ ತೀರಬೇಕಲ !
ದೇಹ ಹೊತ್ತ ಜೀವವದನು
ಉಂಡು ನೀಗ ಬೇಕಲ !
ಬರುವುದೆಲ್ಲ ಬರಲಿ ಬರಲಿ
ಬೇಡವೆನ್ನಲಾಗದು !
ಅಂದರೇನು ಬಂದುದೆಲ್ಲ
ಬಿಟ್ಟು ಮರಳಿ ಹೋಗದು !
ಆದರಾನು ಬೇಡಿಕೊಳುವು-
ದೊಂದೆ ನಿನ್ನ ಬಳಿಯಲಿ !
ಬಂದ ಎಡರನೆದುರುಗೊಳುವ
ಬಲವು ಬರಲಿ ವೈಯಲಿ !!

# ಶಾಂತಿ

೧

ಮಧುರ ಮಳೆಬಿಲ್ಲೆ ಬಾ
ನವಿಲಗರಿಗಣ್ಣೆ ಬಾ
ಚೆಲುವ ಚೈತನ್ಯ ಬಾ ಬಾರೆ ಶಾಂತಿ!
ಕೋಗಿಲೆಯ ಕೂಗೆ ಬಾ
ತುಂಬಿ ಸವಿರಾಗೆ ಬಾ
ಕೊಳಲಿನಿಂಚರವೆ ಬಾ ಬಾರೆ ಶಾಂತಿ!

೨

ಮಲ್ಲಿಗೆಯ ನನೆಯೆ ಬಾ
ಸಂಪಿಗೆಯ ತೆನೆಯೆ ಬಾ
ಕೇತಕೆಯ ಗೊನೆಯೆ ಬಾ ಬಾರೆ ದೇವಿ!
ತನಿಜೇನ ಹನಿಯೆ ಬಾ
ಇನಿವಾಲ ಕೆನೆಯೆ ಬಾ
ಸಕ್ಕರೆಯ ಮನೆಯೆ ಬಾ ಬಾರೆ ದೇವಿ!

೩

ಮಗುವಿನೆಳನಗೆಯಾಗಿ
ರಿಸಿಯ ಒಳಬಗೆಯಾಗಿ
ಬಾ ಬಾಳಿಗೆ ಬಾ ಅಮಲ ಕಮಲವಾಗಿ!
ನಲುಮೆ ಸವಿಸಂಗವೇ
ಮೋಕ್ಷಪದದಂಗವೇ
ಬಾ ಬಾರೆ ಬರಿಮೌನ ಮೌನವಾಗಿ!

೪

ಹಿಗ್ಗಿನಲೆ ನುಗ್ಗಿ ನೀ
ಸಗ್ಗಸೆಲೆ ಸಾಗಿ ನೀ
ಇಲ್ಲಿ ನೆಲೆನಿಲ್ಲು ನೀ ಶಾಂತಿದೇವಿ!
ಮೇಲೆದ್ದ ಮಲೆಯಾಗಿ
ಶ್ರೀ ಸಿದ್ಧ-ಸಿಲೆಯಾಗಿ
ಚಿರಧೀರೆ ನೀನಾಗಿ ನಿಲ್ಲು ದೇವಿ!!

ಓಂ

**ಶಾಂತಿಃ! ಶಾಂತಿಃ!! ಶಾಂತಿಃ!!!**

## ಮಿರ್ಜಿ ಅಣ್ಣಾರಾಯರಿಂದ :—

**ಕಾ ದಂ ಬ ರಿ ಗ ಳು :—**

ನಿಸರ್ಗ
ರಾಷ್ಟ್ರಪುರುಷ
ರಾಮಣ್ಣ ಮಾಸ್ತರು
ಪ್ರತಿ ಸರಕಾರ
ಅಶೋಕ ಚಕ್ರ
ಭಸ್ಮಾಸುರ

**ಕ ಥಾ ಸಂ ಗ್ರ ಹ ಗ ಳು :—**

ಪ್ರಣಯ ಸಮಾಧಿ
ವಿಜಯಶ್ರೀ

**ವಿ ಮ ರ್ಶೆ :—**

ದತ್ತವಾಣಿ
ಲೇಖನ–ಕಲೆ

**ಸಂ ಪಾ ದ ನ :—**

ಚಿನ್ಮಯ ಚಿಂತಾಮಣಿ
ದಶಭಕ್ತಿ

ಶಾಂತಿಸೇವಾ ಸದನ, ಸೇಡಬಾಳ